# ಕೊಡಗು  ಸಂಗಾತಿ

ಡಿಸೆಂಬರ್ 1 ರಿಂದ 15, 2000 ಪಾಕ್ಷಿಕ ಪತ್ರಿಕೆ (ಜಾರ್ದೆ 16-30)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಭಾಷೆಯಲ್ಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 4 ಸಂಚಿಕೆ : 23 ಪುಟಗಳು : 24 ಬೆಲೆ ರೂ. : 6-00




ಲೇಖನ : ಒಳಪುಟಗಳಲ್ಲಿ

## ಭಾರತದ ಪ್ರಿಯಾಂಕ ಚೋಪ್ರಾಗೆ "ವಿಶ್ವ ಸುಂದರಿ 2000" ದ ಕಿರೀಟ.

## "ಕನ್ನಡ ನಾಡಿನ ಜನತೆಗೆ ಹುತ್ರಿ ಹಬ್ಬದ ಶುಭಾಶಯಗಳು"

## ಕೊಡಗು ಸಂಗಾತಿ ಚಂದದಾರರಿಗೊಂದು ಸುವಾರ್ತೆ

ಕೊಡಗು ಸಂಗಾತಿ ಪತ್ರಿಕಾ ಅಭಿವೃದ್ಧಿ ಬಯಸಿ ಲಾಟರಿ ಯೋಜನೆಯನ್ನು ನಾವು ಹಮ್ಮಿಕೊಂಡಿದ್ದೇವೆ. ದಿನಾಂಕ 31-12-2000ದ ಒಳಗಡೆ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಚಂದವನ್ನು ನವೀಕರಿಸಿಕೊಳ್ಳಬೇಕು. ನೆನಪಿರಲಿ ನವೀಕರಿಸಿದವರ ಹೆಸರಿನಲ್ಲಿ ಮಾತ್ರ ಲಾಟರಿಯನ್ನು ಎತ್ತಲಾಗುವುದು.

| | | | |
|---|---|---|---|
| 1ನೇ ಬಹುಮಾನ | : **¼ ಪವನ್ ಚಿನ್ನ** | 2ನೇ ಬಹುಮಾನ | : **1½ ಲೀ ಕುಕ್ಕರ್ 1** |
| 3ನೇ ಬಹುಮಾನ | : **ಸ್ಟೀಲ್ ಫ್ಲಾಸ್ಕ್ 1** | 4ನೇ ಬಹುಮಾನ | : **ಮಿಲ್ಕ್ ಕುಕ್ಕರ್ 1** |
| 5ನೇ ಬಹುಮಾನ | : **ದೋಸೆ ತವ 1** | 6ನೇ ಬಹುಮಾನ | : **ಗೋಡೆ ಗಡಿಯಾರ 1** |
| 7ನೇ ಬಹುಮಾನ | : **ಉತ್ತಮ ಪೆನ್ನು 1** | 8ನೇ ಬಹುಮಾನ | : **ರೋನಾಲ್ಡ್ ಪೆನ್ನುಗಳು 1 ಡಜನ್** |
| 9ನೇ ಬಹುಮಾನ | : **ರೋನಾಲ್ಡ್ ಪೆನ್ನುಗಳು ½ ಡಜನ್** | 10ನೇ ಬಹುಮಾನ | : **ಒಂದು ಸಂಗಾತಿ ಮೊಮೆಂಟೊ.** |

**ವಿ. ಸೂ. :** ಆಕರ್ಷಕ ಬಹುಮಾನ ಲಾಟರಿಯನ್ನು ಮೈಸೂರಿನಲ್ಲಿರುವ ಸಂಗಾತಿಯ ಮುಖ್ಯ ಕಛೇರಿಯಲ್ಲಿ ಗಣ್ಯ ವ್ಯಕ್ತಿಗಳ ಸಮ್ಮುಖದಲ್ಲಿ ದಿನಾಂಕ 7-1-2001 ರವಿವಾರ ಎತ್ತಲಾಗುವುದು.

**ವ್ಯವಸ್ಥಾಪಕರು, ಕೊಡಗು ಸಂಗಾತಿ.**





## ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ (ರಿ.), ಮೈಸೂರು

**ದಿನಾಂಕ 3-12-2000ದಂದು ಮೈಸೂರಿನ ಕಲಾ ಮಂದಿರದಲ್ಲಿ ತೆಗೆದ ಲಾಟರಿ ಫಲಿತಾಂಶ**

| | | |
|---|---|---|
| 1ನೇ ಬಹುಮಾನ ¼ ಪವನ್ ಚಿನ್ನ | : | 1199 ಕೆ. ಪಿ.ಹರೀಶ್, ಕರಡಿಗೋಡು, ಸಿದ್ದಾಪುರ, ಕೊಡಗು |
| 2ನೇ ಬಹುಮಾನ ಸೀಲಿಂಗ್ ಫ್ಯಾನ್ | : | 2282 ಅಂಬರೀಷ್ ಪ್ರಿಂಟರ್ಸ್, ಎಸ್.ಬಿ.ಐ., ಮೈಸೂರು |
| - " - | : | 1423 ಕೆ. ಎಸ್ ಭಾಗೀರಥಿ, ಕುಶಾಲನಗರ |
| 3ನೇ ಬಹುಮಾನ ಗೋಡೆ ಗಡಿಯಾರ | : | 1159 ಎಚ್. ಬಿ. ಹರಿಣಿ, ಮೈಸೂರು, 2364 ಎ. ಪಿ. ಅನಂತಕುಮಾರ್, ಚೆಟ್ಟಳ್ಳಿ |
| | : | 1729 ಹೆಸರಿಲ್ಲ, 1358 ಕೆ. ಎಸ್. ಲೋಕೇಶ್, ಕುಶಾಲನಗರ |
| | : | 2304 ಕೆ. ಎಂ. ಭಾಗ್ಯಶ್ರೀ, 2592 ಲಿಂಗಸೆಟ್ಟಿ, ಮುಡಾ, ಮೈಸೂರು |
| | : | 1301 ಕೊಡಗು ಸಂಗಾತಿ, ಮೈಸೂರು |

ವಿಜೇತರು ದಿನಾಂಕ 25-12-2000ದ ಒಳಗೆ ಲಾಟರಿ ಟಿಕೆಟ್ ತೋರಿಸಿ ಮೈಸೂರಿನ ಜಯಲಕ್ಷ್ಮಿಪುರಂನಲ್ಲಿರುವ (ಗೌಡ ವಿದ್ಯಾರ್ಥಿ ನಿಲಯ) ಸಂಘದ ಕಛೇರಿಯಿಂದ ಪಡೆದುಕೊಳ್ಳುವಂತೆ ಕೋರಲಾಗಿದೆ.

**ಅಧ್ಯಕ್ಷರು,**
**ಕಾರ್ಯಕಾರಿ ಮಂಡಳಿ**

# ತಾಯಿ, ತಾಯಿನಾಡು

ಹುಟ್ಟು ಒಂದು ಆಕಸ್ಮಿಕವಲ್ಲ ಅದು ನಮ್ಮ ಕರ್ಮಫಲ. ಪ್ರಕೃತಿ ಪುರುಷರ ಗೊಂಬೆಯಾಟ. ಪ್ರಕೃತಿ ಪುರುಷ ಎಂದರೆ ಸರ್ವಾಂತರ್ಯಾಮಿ. ಹುಟ್ಟುವುದಕ್ಕೆ ಸಂದರ್ಭಕ್ಕಾಗಿ ಒಂದು ಗರ್ಭ. ಗರ್ಭಕ್ಕೊಂದು ಗುಳ್ಳೆ (Atom) ಅದೇ ನೀನು, ನಾನು. 7 ದಿವಸಗಳವರೆಗೆ ಬರೀ ಗುಳ್ಳೆ. 15 ದಿವಸದಲ್ಲಿ ಎಂಬ್ರಿಯೋ (Embryo) 30 ದಿವಸದಲ್ಲಿ ಫ್ಕೀಟಸ್(Foetus )ಅಂದರೆ ಬೆಳೆದ ಗರ್ಭ, ಭ್ರೂಣ. ಎಂಬ್ರಿಯೋ ಎಂದರೆ ಗರ್ಭದಲ್ಲಿ ಮೂಲ ಅವಸ್ಥೆಯ ಜೀವವಸ್ತು, ಶಿಶುವಿನ ಭ್ರೂಣದ ಆರಂಭದ ಅವಸ್ತೆ. 60 ದಿವಸಗಳಲ್ಲಿ ತಲೆಯ ಭಾಗ ಸುರುವಾಗುವುದು. 210 ದಿವಸಗಳಲ್ಲಿ ಜೀವ ತುಂಬುವುದು 240 ದಿವಸಕ್ಕೆ ಪೂರ್ಣಶರೀರ. ಹೆಚ್ಚು ಕಮ್ಮಿ 270 ದಿವಸಕ್ಕೆ ಶಿಶುವಿನ ಜನನ. ನಮ್ಮ ಜನ್ಮಸ್ಥಾನ ತಾಯಿಯ ಗರ್ಭ. ಭೂಮಿಯಲ್ಲಿ ದೇವರೇ ಅವತರಿಸಲಿ, ನನ್ನಂತಾ ಪಾಪಿ ಜನಿಸಲಿ ಅದು ತಾಯಿಯ ಗರ್ಭದಿಂದಲೇ ಬರಬೇಕು. ದೇವರಿಗೂ ಗರ್ಭಧಾರಿ ತಾಯಿ 270 ದಿವಸ ತನ್ನ ಒಡಲಲ್ಲಿ ಆರೈಕೆ ಮಾಡಿ, ಬೆಳಸಿ, ಪೋಷಿಸಿ, ರಕ್ತ ಕೊಟ್ಟು ನೋವಿನ ಅಗಾತ ಅನುಭವಿಸಿ ಜನ್ಮ ಕೊಟ್ಟ ತಾಯಿ ಪೂಜನೀಯ. ಇಂಗ್ಲೀಷ್‌ನಲ್ಲಿ ಒಂದು ಮಾತಿದೆ. Father gets the child by pleasure. Mother gets the child by pain. ತಂದೆಯ ಆನಂದ ತಾಯಿಗೆ ನೋವು. ಈ ನೋವಿನಲ್ಲಿ ನಲಿವು ಇದೆ.

ಮಕ್ಕಳು ಇದನ್ನರಿಯ ಬೇಕು ತಾಯಿಯ ನೋವಿನ ಪ್ರತಿಬಿಂಬ ಮಕ್ಕಳು. ಮಕ್ಕಳ ಮೊಟ್ಟ ಮೊದಲಿನ ಕರ್ತವ್ಯ ತಾಯಿ ತಂದೆಗೆ ಕೃತಜ್ಞತೆ.

ಬೇಡಿಕೆಗಳಿಗೆ ದೇವರನ್ನು ಹುಡುಕಿಕೊಂಡು ಹೋಗುವ ಅವಶ್ಯಕತೆ ಇಲ್ಲ. ತಾಯಿಯೇ ಪ್ರತ್ಯಕ್ಷ ದೇವತೆ ಅವರ ಆಸೆ ಆಕಾಂಕ್ಷೆಗಳಿಗೆ ಸ್ಪಂದಿಸಿ ಅವರು ಕಣ್ಣೀರಿಡುವ ಹಾಗೆ ಮಾಡಿದರೆ ನಿಮ್ಮ ಜೀವನ ಭಸ್ಮವಾಗುವುದು. ಅಕಸ್ಮಿಕ ತಾಯಿಯ ಮುಖದಲ್ಲಿ ಕಣ್ಣೀರು ಕಂಡರೆ ಅದನ್ನು ಒರೆಸುವ ಕಾರ್ಯ ಮಾಡಿ. ಎಲ್ಲಿ ಹೆಣ್ಣು ಕಣ್ಣೀರಿಡುತ್ತದೋ ಅಲ್ಲಿ ಲಕ್ಷ್ಮಿಗೆ ಸ್ಥಾನವಿಲ್ಲ. ಇದನ್ನು ಪ್ರತೀ ಮಕ್ಕಳು ಅರಿಯಬೇಕು. ಕೆಲವು ಸಂದರ್ಭಗಳಲ್ಲಿ ತಂದೆ ತಾಯಂದಿರೊಟ್ಟಿಗೆ ಭಿನ್ನ ಭೇಧಗಳು ಬರಬಹುದು. ಅವರ ನಿಲುವು ನಿಮಗಿಷ್ಟವಿಲ್ಲದಿರಬಹುದು. ಆಗ ವಿವೇಕತೆಯನ್ನು ಕಳೆದು ಕೊಳ್ಳಬೇಡಿ. ವಿವೇಕತೆಯಿಂದ ಪ್ರೀತಿಯಿಂದ ಸಮಯಾವಕಾಶ ವನ್ನರಿತು ಅವರಿಗೆ ನಿಮ್ಮ ನಿಲುವಿನ ವಿವರಣೆ ನೀಡಿ ಅವರ ಮನ ಒಲಿಸಿ. ಪರಮಾತ್ಮನು ತಂದೆಯಂತೆ ನಿಮ್ಮ ಹಿತೈಷಿ. ತಂದೆ ತಾಯಿ ಮಕ್ಕಳಿಗೆ ಹಿತವಾಗುವುದಕ್ಕೆ ಮಾತ್ರ ಸಹಾಯ ಮಾಡುತ್ತಾನೆ. ಅಹಿತ ಕರ್ಮಗಳನ್ನು ಮಾಡದಂತೆ ತಡೆಯುತ್ತಾರೆ. ಹೆದರಿಸಿ ಬೆದರಿಸಿ, ಹಣ ದೋಚದೆ ನಮ್ಮ ಹಿತಕ್ಕಾಗಿ ಹಗಲು ಇರುಳು ಶ್ರಮಿಸುತ್ತಾರೆ. ದೇವತೆಗಳು ಅಂಗಡಿ ಮಾಲೀಕನಿದ್ದ ಹಾಗೆ. ಅಂಗಡಿಯವನು ತನಗೆ ಬರಬೇಕಾದ ಮೊಬಲಗು ಬಂದಿತೆಂದರೆ ಆ ಮೊಬಲಿಗಿಗೆ ತಕ್ಕಂತೆ ಕೇಳಿದ ವಸ್ತುಗಳನ್ನು ನೀಡುತ್ತಾನೆ. ಗ್ರಾಹಕನ ಹಿತಾಹಿತ ಚಿಂತೆ ಅವನಿಗಿಲ್ಲ ಆದ್ದರಿಂದ ದೇವರಿಗಿಂತ ಹೆಚ್ಚಾಗಿ ನಿಮ್ಮನ್ನು ಪೋಷಿಸುವವರು ತಾಯಿ ತಂದೆ. ಅವರ ಮನ ನೋಯಿಸಬೇಡಿ ಅವರನ್ನು ದುಃಖಕ್ಕೆ ಗುರಿಮಾಡಬೇಡಿ. ಅದೇ ನಿಮಗೆ ಶ್ರೇಯಸ್ಸು.

ತಾಯಿನಾಡು : ತಾಯಿ ಎಷ್ಟು ಶ್ರೇಷ್ಟಳೋ, ಅಷ್ಟೆ ಪವಿತ್ರಳು ಹಾಗೆಯೇ ನಮ್ಮ ಭಾರವನ್ನು ಸದಾ ಹೊತ್ತು ನಮಗೆ ಬೇಕಾದ ಮಣ್ಣು ಗಾಳಿ, ನೀರು ಆಹಾರ ಒದಗಿಸಿಕೊಡುತ್ತಿರುವ ತಾಯಿನಾಡು ಅಷ್ಟೇ ಶ್ರೇಷ್ಟ ಮತ್ತು ಪವಿತ್ರ. ಇದನ್ನು ಅನುಭವಿಸ ಬೇಕು, ಕಾಪಾಡಬೇಕು. ನಾಡು ಎಂದರೆ ಪರಿಸರವೂ ಹೌದು ಜನರೂ ಹೌದು ಜನರೆಂದರೆ ಮಾನವ ಸಮಾಜ ಅದು ನಮ್ಮ ಜನಾಂಗದವರೇ ಆಗಬಹುದು, ಬೇರೆ ಜನಾಂಗದವರೇ ಆಗಬಹುದು. ದೀನ ದಲಿತರೂ ಆಗಬಹುದು. ಪಶು, ಪಕ್ಷಿ ಪ್ರಾಣಿ, ಗಿಡಮರ ಗಳಿರಬಹುದು. ಅದನ್ನು ಬೇಕಾದಷ್ಟು ಬಳಸಿ ಬೆಳೆಸಬೇಕು ದುರ್ಬಳಕೆ ಮಾಡಬಾರದು. ತಾಯಿನಾಡನ್ನು ಬಲಪಡಿಸಲು ಕಾಪಾಡಲು ನಾವು ಕಂಕಣ ಬದ್ಧರಾಗಬೇಕು. ಯಾವ ದೇಶದಲ್ಲೇ ಆಗಲಿ ಯಾವದಾದರೊಂದು ಜನಾಂಗ ಮಾತ್ರ ಬಾಳಲು ಸಾಧ್ಯವೇ ಇಲ್ಲ. ಜನಾಂಗ ಜನಾಂಗವನ್ನವಲಂಭಿಸಿರಬೇಕಾಗುತ್ತದೆ. ಆದ್ದರಿಂದ ಜನರು ಜನರನ್ನು ಜನಾಂಗ ಜನಾಂಗವನ್ನು ಹಳಿಯಬಾರದು.

ತರುಣ ತರುಣಿಯರು ಎಂದರೆ ಯುವ ಜನಾಂಗ. ದೇಶದ ಆಸ್ತಿ, ದೇಶದ ವಿಶ್ವವಿದ್ಯಾಲಯಗಳು ಬ್ಯಾಂಕುಗಳಿದ್ದಂತೆ ಈ ವಿಶ್ವವಿದ್ಯಾಲಯಗಳಿಂದ ದೇಶಕ್ಕೆ ಬೇಕಾದ ವೈದ್ಯರು, ಇಂಜಿನಿಯರು, ಕಾರ್ಮಿಕರು, ಜ್ಞಾನಿಗಳು ಹೀಗೆ ದೇಶಕ್ಕೆ ಬೇಕಾಗುವವರನ್ನು ಬ್ಯಾಂಕಿನಲ್ಲಿ ಚೆಕ್ಕುಕೊಟ್ಟು ಹಣ ಪಡೆಯುವಂತೆ ವಿಶ್ವವಿದ್ಯಾನಿಲಯಗಳಿಂದ ದೇಶಕ್ಕೆ ಬೇಕಾದ ಬೇಕಾಗುವಾಗ ಯೋಗ್ಯರನ್ನು ಪಡೆಯುತ್ತೇವೆ. ಅದಕ್ಕಾಗಿ ಯುವ ಜನಾಂಗ ವಿಶ್ವವಿದ್ಯಾನಿಲಯಗಳಲ್ಲಿ ತಮ್ಮನ್ನು ತಾವು ಸಂಸ್ಕರಿಸಿಕೊಳ್ಳ ಬೇಕು. ಶಿಸ್ತು ಪಾಲನೆ, ದೇಶ ರಕ್ಷಣೆ, ಸಮಾಜ ಹಿತ, ಮಾನವತ್ವವನ್ನು ಪಾಲಿಸಿ ಪೋಷಿಸಬೇಕು.

ಯುವ ಜನಾಂಗ ತಮ್ಮನ್ನು ತಾವು ಸಂಸ್ಕರಿಸಿಕೊಂಡ ನಂತರ ಸಂಪಾದನೆಗಿಳಿಯಬೇಕು. ಇಲ್ಲಿ ದೀನ ದಲಿತರ ಉದ್ಧಾರ ವಾಗಬೇಕು. ನಿಮ್ಮ ಕಲಿಕೆಯಲ್ಲಿ ಇವರೂ ಆರ್ಥಿಕ ಸಹಾಯ, ಆಹಾರ ಸಹಾಯ, ಬಟ್ಟೆ ಸಹಾಯ ಮಾಡಿದವರು ಅವರ ಶ್ರಮವನ್ನು ಚೆನ್ನಾಗಿ ಅರಿಯಿರಿ ಸಂಪಾದನೆಯಲ್ಲಿ ನೀವು ಬಾಳಿರಿ. ನಿಮ್ಮ ಸಂಸಾರವನ್ನು ಪೋಷಿಸಿರಿ, ನಿಮ್ಮ ಪೀಳಿಗೆಯನ್ನು ದೇಶಕ್ಕಾಗಿ ತಾಯಿನಾಡಿಗಾಗಿ ತಯಾರುಮಾಡಿರಿ. ನಾಡಿಗಾಗಿ ದುಡಿಯಿರಿ. ದೇಶಕ್ಕೆ ಕೀರ್ತಿಗಳಿಸಿ.

ತಾಯಿ ಮತ್ತು ತಾಯಿನಾಡು ಮಾನವನ ಬೆಲೆಕಟ್ಟಲಾರದ ಆಸ್ತಿ, ಇದನ್ನು ನೋಯಿಸಬೇಡಿ ಇದಕ್ಕೆ ಶತ್ರುಗಳಾಗಬೇಡಿ. ಒಬ್ಬರಿಗೆ ಉಪಕಾರ ಮಾಡಲು ಸಾಧ್ಯವಾಗದೆ ಹೋದರೆ ಅಪಕಾರ ಮಾಡಬೇಡಿ. ಅದೇ ದೊಡ್ಡ ಉಪಕಾರ ತಾಯಿ ಮತ್ತು ತಾಯಿ ನಾಡಿನ ಸೇವೆಗೆ ಯುವಜನಾಂಗವು ಸದಾ ಸಿದ್ದವಾಗಿ ಅದೇ ನಿಮ್ಮ ಜೀವನದ ಗುರಿಯಾಗಿರಲಿ.

- ಚೇಂದ್ರಿಮಾಡ. ಗ. ಮುತ್ತಪ್ಪ. ಕುಶಾಲನಗರ.

ಗಂಡಿಗೆ ಎದೆ ಗಟ್ಟಿ ಇರಬೇಕು, ಹೆಣ್ಣಿಗೆ ಸೊಂಟ ಗಟ್ಟಿ ಇರಬೇಕು

# ದೇವರ ಆಟ

ಅಂದ್ ಅಮಾವಾಸ್ಯೆ. ಇಡೀ ಊರೇ ಕಾರ್ಗತ್ತಲೆಯ ಕಂಬಳಿನ ಹೊದ್ದ್ ಮಲಗಿಕಂಡಿರ್‌ಕಾಕನ ಆ ಕರಾಳ ರಾತ್ರಿಯ ನಿಶ್ಯಬ್ಧತೆನ ಸೀಳಿಕಂಡ್ ಒಂದ್ ಹೆಂಗಸ್‌ನ ಚೀತ್ಕಾರ ಕೇಳಿ ಬಾತ್. ಬೆಚ್ಚಂಗೆ ಮಲಗಿಕಂಡಿದ್ದ ಜನ ಬೆಚ್ಚಿಬಿದ್ದ್ ಆಲಿಸಿದೊ. ಮತ್ತೆ ಮತ್ತೆ ಒಂದ್ ಹೆಣ್ಣ್ ದನಿ ಗೋಳಾಡುವ ಶಬ್ಧ ಪ್ರತಿಧ್ವನಿಸಿತ್. ಅಷ್ಟ್ ಹೊತ್ತ್ ಸದ್ದಿಲ್ಲದೆ ಮಲಗಿದ್ದ ಊರ್‌ನ ನಾಯಿಗ ಈಗ ಜೋರಾಗಿ ಬೊಗುಳಿಕೆ ಶುರು ಮಾಡ್ದೊ. ಜನಗ ಎದ್ದ್ ಹೊರಗೆ ಓಡಿ ಬಂದ್ ನೋಡ್‌ಕಾಕನ ದೂರದ ದಿಬ್ಬದ ಮೇಲೆ ಒಂಟಿ ಮನೆ ಬೆಂಕಿ ಹತ್ತಿಕಂಡ್ ಭುಗುಭುಗು ಉರಿಯುತ್ತಿತ್ತ್. ಆ ಮನೇಲಿ ಇದ್ದದ್ ಇಬ್ಬರೇ. ಒಂದ್ ವಯಸ್ಸಾದ ಟಿಬೆಟಿಯನ್ ಹೆಂಗಸ್ ಮತ್ತೆ ಅವಳ ಆರು ವರ್ಷ ವಯಸ್ಸಿನ ಮೊಮ್ಮಗಳ್. ಆ ಮನೆಗೆ ಹೆಂಗೆ ಬೆಂಕಿ ಹತ್ತಿಕಂಡತೋ ಯಾರಿಗೂ ಗೊತ್ತಾತ್‌ಲೆ. ಜನ ಎಲ್ಲಾ ಓಡಿಕಂಡ್ ಆ ಮನೆಯ ಹತ್ರ ಬರುವಷ್ಟರ್ಲಿ ಮೈ ಪೂರಾ ಬೆಂಕಿ ಹತ್ತಿಕಂಡ ಆ ವೃದ್ಧ ಹೆಂಗಸ್ ದಢಾರ್‌ತ ಮುಂಬಾಗಿಲ್ ತೆಗ್ದ್, ಹೊಸ್ತಿಲ್‌ಂದ ರಟ್ಟಿಹೋಗಿ ಅಂಗಳಕ್ಕೆ ಬಂದ್ ಬೀತ್. ಬಿದ್ದವ್ಳು ಮತ್ತೆ ಎದ್ದತ್ಲೆ.... ಒಂದಿಬ್ಬರು ಕೂಡಲೆ ಎಲ್ಲಿಂದೊ ಎರಡ್ ಕಂಬಳಿನ ತಂದ್ ಅವಳ ಮೈಗೆ ಹೊಚ್ಚಿದೊ. ಆದ್ರೆ ಅದ್ರ್‌ಂದ ಎಂತ ಪ್ರಯೋಜನ ಆತ್ಲೆ. ಅವಳ ಪ್ರಾಣ ಪಕ್ಷಿ ಆಗಲೇ ಹಾರಿ ಹೋಗಿತ್ತ್. ತನ್ನ ಆರು ವರ್ಷದ ಕೂಸ್‌ನ ಪ್ರಾಣನ ಉಳ್ಸಿಕೆ ಶತಪ್ರಯತ್ನ ಮಾಡಿ ಸಾಧ್ಯವಾಗದೆ ಆ ಅಜ್ಜಿ ತನ್ನ ಪ್ರಾಣನೇ ತ್ಯಾಗ ಮಾಡಿತ್ತ್.

ಈ ದೃಶ್ಯನ ಕಣ್ಣಾರೆ ಕಂಡ್ ಬೆಚ್ಚಿ ಬಿದ್ದ ಜನ ಏನ್ ಮಾಡೊಕುತ ತೋಚದೆ ನಿತ್ತಿರ್‌ಕಾಕನ, ಆ ಮನೆದ್ ಮಹಡಿ ಮೇಲೆಂದ ಆ ಕೂಸ್ ಕಿರ್ಚಾಡಿಕೆ ಶುರು ಮಾಡ್ತ್. ಇಷ್ಟ್ ಹೊತ್ತಿಗೆ ಬೆಂಕಿ ಅರ್ಧ ಮನೆನ ನುಂಗಿ ಹಾಕಿತ್ತ್. ನೀರ್ ಹುಯ್ದ್ ಬೆಂಕಿನ ಆರಿಸಿಕೆ ಖಂಡಿತಾ ಸಾಧ್ಯ ಇತ್ತ್‌ಲೆ. ಜನಕೆ ಒಳಗೆ ಕಾಲ್ ಮಡ್ಗಿಕ್ಕಾಗದಂಗೆ ಬೆಂಕಿ ಧಗಧಗ ಉರಿಯತಿರ್ಕ್ಕಾಕನ ಎಲ್ಲಿಂದೊ ಒಬ್ಬ ಒಂದ್ ಏಣಿನ ತಂದ್ ಮನೆಯ ಒಂದ್ ಬದಿಗೆ ಆನಿಸಿ ಮಡ್ಗಿತ್. ಚಕಚಕಾತ ಏಣಿ ಮೇಲೆ ಹತ್ತಿ ಕಿಟಕಿ ಒಳಗೆಂದ ಮನೆ ಒಳಗೆ ಧುಮುಕಿ ಮಾಯ ಆತ್. ಕೆಲವೇ ಕ್ಷಣಗಳಲ್ಲಿ ಅಂವ ಮತ್ತೆ ಕಿಟಕಿಲಿ ಕಾಣೆಸಿಕಂಡತ್. ಅವನ ಕೈಲಿ ಈಗ ಹೆದರಿ ಕಂಗಾಲಾದ ಆ ಹೆಣ್ಣ್ ಕೂಸಿತ್ತ್. ಅಂವ ಆ ಕೂಸ್‌ನ ಎದೆಗೆ ಅವಚಿಕಂಡ್ ಏಣಿಂದ ಕೆಳಗಿಳೀತಾ ಇದ್ದಂಗೇ ಆ ಏಣಿಗೂ ಬೆಂಕಿ ಹತ್ತಿ ಉರಿದ್‌ಹೋತ್. ಅಂವ ಆ ಕೂಸ್‌ನ, ಕೆಳಗೆ ಕಾಯ್ತಾ ಇದ್ದ ಜನರಿಗೆ ಒಪ್ಪಿಸಿ ಸದ್ದಿಲ್ಲದೆ ಕತ್ತಲೇಲಿ ಮಾಯ ಆಗಿ ಹೋತ್.

ಮಾರನೇ ದಿನ ಜನ ಎಲ್ಲಾ ಸೇರಿ ಸ್ವಲ್ಪ ವಿಚಾರಣೆ ನಡೆಸಿ ನೋಡ್‌ಕಾಕನ ಅವ್ಕೆ ಗೊತ್ತಾತ್ ಆ ಕೂಸ್‌ದ್ ಅಪ್ಪ ಅವ್ವ ಇಬ್ಬರೂ ಒಂದ್ ವರ್ಷದ ಕೆಳಗೆ ತೀರಿಕಂಡಿದ್ದೊ. 'ಹತ್ತಿರದ ನೆಂಟರಿಷ್ಟರ್ ಯಾರೂ ಅವ್ಳಿಗೆ ಇತ್ತ್‌ಲೆ. ಆ ಅಜ್ಜೀನೇ ಅವ್ಳ ಸರ್ವಸ್ವ ಆಗಿತ್ತ್. ಇನ್ನ್ ಆ ಅನಾಥ ಗೂಡೆದ್ ಗತಿ ಎಂತ? ಅದ್ ಬೀದಿ ಪಾಲಾಗಿ ಹೋತಲೆ. ಹಿಂಗಾಕೆ ಬುಡ್‌ಕಾಗದ್. ಆ ಪಾಪದ ಕೂಸ್‌ನ ಮುಂದಕ್ಕೆ ಎಂತ ಮಾಡ್ದತೇಳಿ ಇತ್ಯರ್ಥ ಮಾಡಿಕೆ ಊರ ಮುಖಂಡರೆಲ್ಲಾ ಸೇರಿ ಸಮಾಜಲಿ ಒಂದ್ ಮೀಟಿಂಗ್ ಮಡ್ಗಿದೊ. ಊರವು ಸುಮಾರ್ ಜನ ಆ ಮೀಟಿಂಗ್‌ಗೆ ಹಾಜರಾದೋ. ಆ ದುರದೃಷ್ಟಾಕರ ಕೂಸ್‌ನ ನಾವು ಬೀದಿ ಪಾಲ್ ಮಾಡ್‌ಕ್ಕಾಗದ್... ಎಂತ ಮಾಡುದು ಹೇಳಿತೇಳಿ ಚೇರ್‌ಮನ್ ಮಾದಪ್ಪ ಜನರ್ನ ಕೇಳಿಕಂಡತ್. ನಮ್ಮ ಹೈಸ್ಕೂಲ್‌ನ ಸುಂದರಿ ಟೀಚರ್ ತುಂಬಾ ಕರುಣಾಮಯಿ. ಅವ್ಳು ಆ ಕೂಸ್‌ನ ನಾನೇ ನೋಡಿಕಣೆ. ಅವ್ಳಿಗೆ ಒಳ್ಳೆ ವಿದ್ಯಾಬುದ್ಧಿನ ನಾನ್ ದೊರಕಿಸಿ ಕೊಟ್ಟನೆ ತ್ಹೇಳಿ ಒಪ್ಪಿಕಂಡತ್.

ಎರ್ಡ್ ಮೂರು ಜನ ರೈತರ್ ಅವಳ್ನ ತಾವೇ ಬೆಳ್ಸಿವೆತೇಳಿ ಎದ್ದ್‌ನಿತ್ತೊ. ಊರ್‌ನ ಸಾವ್‌ಕಾರ ಕುಶಾಲಪ್ಪನವು 'ನಾನು ಈ ಕೂಸ್‌ನ ಆರೈಕೆದ್ ಜವಾಬ್ದಾರಿ ತಕಂಡನೆ. ಅದರ ಊಟ, ವಸತಿ ಎಲ್ಲಾ ನಾನೇ ನೋಡಿಕಂಡನೆ. ನನ್ನ ಮಕ್ಕಳೊಟ್ಟಿಗೇ ಇವ್ಳೂ ಬೆಳೆಯಲಿ. ಇವ್ಳ ಜವಾಬ್ಧಾರಿ ನಂಗಿರ್‌ಲಿ" ತೇಳಿ ಘೋಷಣೆ ಮಾಡ್ದೊ. ಇಷ್ಟೆಲ್ಲಾ ಮಾತ್‌ಕತೆ ನಡಿಯಕ್ಕಾಕನ ಆ ಕೂಸ್ ಸಪ್ಪೆ ಮುಖ ಮಾಡಿಕಂಡ್ ಒಂದ್ ಮೂಲೆಲಿ ನಿತ್ತ್‌ಕಂಡಿತ್ತ್. ಅಲ್ಲಿದ್ದ ಜನರಿಗೆ, ಆ ಕೂಸ್‌ನ ಸಾವ್‌ಕಾರಂಗೆ ಒಪ್ಪಿಸುದೇ ಸರಿತೇಳಿ ಅನ್ನಿಸಿತ್. "ಬೇರೆ ಯಾರಿಗಾದ್ರ್ ಈ ವಿಷಯದ ಬಗ್ಗೆ ಎಂತಾರ್ ಹೇಳಿಕೆ ಉಟ್ಟಾ?" ತೇಳಿ ಚೇರಮನ್ ಕೇಳ್ತ್. ಆಗ ಅಲ್ಲಿ ಸೇರಿದ್ದ ಜನಗಳೆಲ್ಲರ ಹಿಂದೆ ನಿತ್ತ್‌ಕಂಡಿದ್ದ ಒಬ್ಬ ಮೆಲ್ಲೆ ನಡ್ಕಂಡ್ ಸ್ಟೇಜ್‌ನ ಹತ್ರ ಬಾತ್. ಅಂವ ಹಂಗೆ ನಿಧಾನಲಿ ಹಲ್ಲ್ ಕಚ್ಚಿ ಕಂಡ್ ನಡಿಯಕ್ಕಾಕನ ಅಂವ ಬಾರೀ ಬ್ಯಾನೆ ಅನುಭವಿಸುತ್ತಿರುವಂಗೆ ಕಾಣ್‌ತಿತ್ತ್. ಅಂವ ನೇರ ಆ ಗೂಡೆನ ಹತ್ರ ಬಂದ್ ಅವನ ಎರಡೂ ಕೈಗಳ್ನ ಚಾಚಿ ಹಿಡ್ಕಂಡತ್. ಅವನ ಕೈಗಳ್ನ ನೋಡಿದ ಜನರ ಮೈ "ಜುಂ"ತೇಳ್ತ್. ಅವನ ಬೆರಳ್, ಕೈ ಚರ್ಮ ಎಲ್ಲ ಅಲ್ಲಲ್ಲಿ ಬೆಂದ್ ಹೋಗಿ ಕರ್‌ಕ್‌ಲಾಗಿ ಹೋಗಿತ್ತ್.

ಜನ ನೋಡ್‌ತ್ತಿದ್ದಂಗೇ ಆ ಕೂಸ್ ನಿತ್ತಲ್ಲಿಂದ ಓಡಿ ಬಂದ್ ಅವನ ಕಾಲ್‌ಗಳ್ನ ಬಾಚಿ ತಬ್ಬಿಕಂಡ್ ಬಿಕ್ಕಿ ಬಿಕ್ಕಿ ಜೋರಾಗಿ ಮರ್ಡಿಕೆ ಶುರು ಮಾಡ್ತ್. ಆ ಮನ್ಸ ಅವಳ್ನ ಕಷ್ಟಲಿ ಎತ್ತಿ, ಎದೆಗೆ ಅವಚಿಕಂಡತ್. ಆ ದಿನ ಬೆಂಕಿ ಅನಾಹುತ ಆಕಾಕನ ಪ್ರಾಣಭಯಂದ ಹೆದರಿ ಅವನ್ನ ಹಿಡ್ಕಂಡಿದ್ದ ಹಂಗೇ ಇಂದೂನೂ ಸಹ ಆ ಕೂಸ್ ಅವನ್ನ ಬಾಚಿ ತಬ್ಬಿಕಂಡ್ ಮರ್ಡ್‌ತಿತ್ತ್. ಅಂವ ಆ ಕೂಸ್‌ನ ಮುಖನ ತನ್ನ ಕಡೆಗೆ ತಿರ್ಗಿಸಿ ಅದರ ಕಣ್ಣ್ ನೀರ್‌ನ ವರ್ಸಿತ್. ಆ ಕೂಸ್ ಅವನ ಕಡೆ ನೋಡಿ ಕೃತಜ್ಞತೆಂದ ನೆಗಾಡ್ತ್. ಇಡೀ ಕೋಣೆಲಿ ಈಗ ನಿಶ್ಯಬ್ಧ.... ಜನರ ಕಣ್ಣ್‌ಗ ಈ ದೃಶ್ಯ ನೋಡಿ ಮಂಜಾತ್. ಅಷ್ಟರ್ಲಿ ಚೇರ್‌ಮನ್ ಎದ್ದ್‌ನಿತ್ತ್ "ಈ ಮೀಟಿಂಗ್‌ನ ಇಲ್ಲಿಗೆ ಮುಕ್ತಾಯ ಮಾಡುವೆ" ತ್ತೇಳಿ ಘೋಷಣೆ ಮಾಡ್ತ್.

– ಎಡಿಕೇರಿ ಸುದರ್ಶನ್, ಬೆಂಗಳೂರು

ಜಗಿದುದ್ದನ್ನೇ ಜಗಿಯಬಾರದು

# ಕನ್ನಡ ಸಾಹಿತ್ಯಕ್ಕೆ ಕೊಡಗಿನ ಕೊಡುಗೆ

ವಿಶ್ವದಲ್ಲೇ ವಿಶಿಷ್ಟವಾದ ಸ್ಥಾನ ಭಾರತಕ್ಕಾದರೆ, ಭಾರತದಲ್ಲೇ ವಿಶಿಷ್ಟವಾದ ಹೆಸರು ಕರ್ನಾಟಕಕ್ಕೆ ಅದರಲ್ಲಿ ದಕ್ಷಿಣದ ಕಾಶ್ಮೀರ ಎಂದೇ ಹೆಸರಾದ ಕರ್ನಾಟಕದ ಕೊಡಗು ಜಿಲ್ಲೆ ಎಲ್ಲಾ ವರ್ಗದವರ ಆಕರ್ಷಣೆಯ ಕೇಂದ್ರ. ಈ ನಾಡಿನ ಸುಂದರವಾದ, ಸಂಪದ್ಭರಿತವಾದ ಪ್ರಾಕೃತಿಕ ಕೊಡುಗೆಯೊಂದಿಗೆ, ಶೌರ್ಯ, ಸಾಹಸ, ಸೌಂದರ್ಯದ ಪ್ರತೀಕವಾಗಿರುವ ಇಲ್ಲಿಯ ಜನ ನಾಡಿಗೆ ಶೋಭೆ ತಂದಿದ್ದಾರೆ. ಸಾಮಾಜಿಕ ಬದುಕಿನ ಅಗತ್ಯಗಳಿಗೆ ಯಥೇಚ್ಛವಾಗಿ ಬೆಳೆಯುವ ಹಣದ ಬೆಳೆಗಳನ್ನು ನಾಡಿನಾಚೆಗೂ ಕಳುಹಿಸುವ ಹೆಚ್ಚುಗಾರಿಕೆ ಇವರದ್ದು. ಅಂತೆಯೇ ಸಾಂಸ್ಕೃತಿಕವಾಗಿಯೂ, ಅತೀ ಸಂಪನ್ನತೆ ಇಲ್ಲಿಯವರದು. "ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತ ಮತಿಗಳ ಈ ನಾಡವರ್" ಎನ್ನುವ ಮಾತಿನ ಸತ್ಯಕ್ಕೆ ಹತ್ತಿರವೆಂಬಂತೆ ಇಲ್ಲಿಯವರ ಸಾಹಿತ್ಯ ಜನಪದ ಕಲೆಗಳ ಸಂಪತ್ತು ಅಪಾರವಾಗಿದೆ.

ಸದಭಿಮಾನದ ಗೂಡು ಚೆಲುವ ಕನ್ನಡ ನಾಡಿನ ನದಿಗಳಾದ ಕೃಷ್ಣ ತುಂಗೆಯರ ಜೊತೆ ನಮ್ಮ ಕಾವೇರಿ ನದಿಯು ಸೇರಿದಂತೆ ಕನ್ನಡ ಸಾಹಿತ್ಯದ ಭವ್ಯ ಗೂಡಿಗೆ ನಮ್ಮ ಕೊಡಗಿನವರ ಸಾಹಿತ್ಯದ ಕೊಡುಗೆ ಅಪಾರವಾಗಿದೆ. ದಕ್ಷಿಣ ಕಾಶ್ಮೀರ, ಕರ್ನಾಟಕ ಸ್ಕಾಟ್‌ಲ್ಯಾಂಡ್ ಎಂದು ಕರೆಯಲ್ಪಡುವ ಕೊಡುಗು ಜಿಲ್ಲೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ ಸ್ಥಾಪನೆಯಾದದ್ದು 1969ರಲ್ಲಿ. 1976 ಫೆಬ್ರುವರಿ 25ರಂದು ವೀರಾಜಪೇಟೆಯಲ್ಲಿ ಕರ್ನಾಟಕ ಸಂಘ ಸ್ಥಾಪನೆಯಾದುದು ಇತಿಹಾಸದಲ್ಲಿ ಒಂದು ಅವಿಸ್ಮರಣೀಯ ವಾದುದು. ಇಂತಹ ಪವಿತ್ರ ನಾಡಿನಲ್ಲಿ ಜನಿಸಿದ ಹಾಗೂ ನೆರೆ ಜಿಲ್ಲೆಗಳಿಂದ ಹಲವಾರು ವೃತ್ತಿಗಳಲ್ಲಿ ಸಂಸ್ಕೃತಿಯನ್ನು ಕನ್ನಡ ಸಾಹಿತ್ಯಕ್ಕೆ ನೀಡಿ ಅಮೂಲಾಗ್ರ ಸೇವೆ ಮಾಡಿದವರ ನೆನಪುಗಳನ್ನು ಈ ಪುಣ್ಯದಿನದಂದು ಸ್ಮರಿಸುವುದು ಅವರೆಲ್ಲರಿಗೂ ಕೊಡುವ ಗೌರವವಾಗಿದೆ.

ಕೊಡಗಿನಲ್ಲಿಯೇ ರಚಿತವಾದ ಮೊದಲ ಕನ್ನಡ ಕೃತಿ- "ರಾಮರಾಜ್ಯವಿಜಯಕಾವ್ಯ" ಇದನ್ನು ರಚಿಸಿದವರು ಕೊಡಗಿನಲ್ಲಿ ಆಳಿದ ಚೆಂಗಾಳೆ, ನಂದ ರಾಜನ ಮಂತ್ರಿ ಆಗಿದ್ದ ದೇವಪ್ಪ ಕವಿ. ಇದು ಮಹಾ ಕಾವ್ಯ. ಓಡ್ಲೆಮನೆ ಆತ್ಮರಾಮ ಶಾಸ್ತ್ರಿಗಳು "ಸನಾತನ ಧರ್ಮ" ಎಂಬ ಕೃತಿಯನ್ನು ರಚಿಸಿ ವಿಖ್ಯಾತರಾಗಿದ್ದಾರೆ. ಅಲ್ಲದೆ, ಸುಸ್ಮಿತ ಪಂಡಿತರಾಗಿದ್ದಾರೆ. ಹಾಗೆಯೇ ಕೊಡಗಿನವರೇ ಆದ ಅನೇಕ ಸ್ತ್ರೀಪುರುಷರಲ್ಲಿ ಗೌರಮ್ಮ ಗೋಪಾಲಕೃಷ್ಣ (1911-1934) ಇವರು ಅನೇಕ ಸಣ್ಣ ಕತೆಗಳನ್ನು ಬರೆದಿರುತ್ತಾರೆ. ಇವರ ಪ್ರಸಿದ್ಧ ಕಥಾ ಸಂಕಲನ - ಕಂಬನಿ, ಚಿಗುರು. ಬಿ. ಎಸ್. ಕೃಷ್ಣಮೂರ್ತಿ "ಉಮಾ ಸುಂದರಿ" ಎಂಬ ಕೃತಿಯನ್ನು ಬರೆದಿರುತ್ತಾರೆ. ಅನಂತಪದ್ಮನಾಭಯ್ಯ 1930ರಲ್ಲಿ "ಪರಮಹಂಸ", "ಶ್ರೀ ಕೃಷ್ಣ ಚರಿತಾಮೃತ" ಮತ್ತು ತುಳಸೀದಾಸ ರಾಮಾಯಣ" ಎಂಬ ಕಾವ್ಯಗಳನ್ನು ಬರೆದಿರುತ್ತಾರೆ. ವಿ. ಎನ್. ಕೃಷ್ಣಯ್ಯನವರು "ಕೊಡಗಿನ ಇತಿಹಾಸ" ಎಂಬ ಬೃಹತ್ ಗ್ರಂಥವನ್ನು ಬರೆದಿರುತ್ತಾರೆ. ಈ ಕೃತಿ ಗ್ರಂಥವಾಗಿದೆ. ಹಾಗೆಯೇ ಬಿ.ಡಿ. ಗಣಪತಿಯವರು "ಪ್ರತಿಧ್ವನಿ", "ಕಾವೇರಿ", "ಸತ್ಯಶೋಧನೆ" ಎಂಬ ಹತ್ತಾರು ಕೃತಿಗಳನ್ನು ಬರೆದಿರುತ್ತಾರೆ. ಕೊಡಗಿನ ಜನಪ್ರಿಯ ಶಕ್ತಿ ದಿನ ಪತ್ರಿಕೆಯ ಸ್ಥಾಪಕ ಸಂಪಾದಕರಾದ ಬಿ. ಎಸ್. ಗೋಪಾಲ ಕೃಷ್ಣನವರು. "ಭೀಮಸೇನ", "ಸತ್ಯದರ್ಶನ", "ಶ್ರೀಮದ್ ಭಗವದ್ಗೀತಾ" ಎಂಬ ಹಲವಾರು ಕೃತಿಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿರುವದಲ್ಲದೆ. ಹಾಗೂ ಪತ್ರಿಕಾ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ ಮತ್ತು ವಿಶ್ವೇಶ್ವರಯ್ಯ ನವರತ್ನ ಪ್ರಶಸ್ತಿಯನ್ನು ಪಡೆದ ಧೀಮಂತ ವ್ಯಕ್ತಿಯೂ ಆಗಿದ್ದಾರೆ.

ಎದುರ್ಕಳ ಶಂಕರನಾರಾಯಣ ಭಟ್‌ರವರು "ಶ್ರೀ ಕಾವೇರಿ ವೈಭವ" " ಹಿಂದೂ ಧರ್ಮದ ಪರಿಚಯ", " ಶ್ರೀ ಇಗ್ಗುತಪ್ಪ ಮಹಾತ್ಮೆ" ಎಂಬ ಹಲವಾರು ಕೃತಿಗಳಿಂದ ಕನ್ನಡ ಸಾಹಿತ್ಯಕ್ಕೆ ತಮ್ಮ ಅಪಾರವಾದ ಕಾಣಿಕೆಯನ್ನು ನೀಡಿ ಕನ್ನಡ ಸಾಹಿತ್ಯವನ್ನು ಸಂಪದ್ಭರಿತವಾಗಿಸಿದ್ದಾರೆ.

ಐ.ಮಾ. ಮುತ್ತಣ್ಣನವರು "ಕೊಡವ ಸಂಸ್ಕೃತಿ", "ಮಹಾಭಾರತ ಲೋಕದರ್ಶನ", "ಭಾರತ ಸಾಹಿತ್ಯ ಸಂಸ್ಕೃತಿ", "ಮಕ್ಕಳ ರಾಮಾಯಣ" ಮೊದಲಾದ ಕೃತಿಗಳನ್ನು ಬರೆದಿರುತ್ತಾರೆ. ದಿ. ಬಿ.ಎಸ್. ಕುಶಾಲಪ್ಪನವರುನವರು "ಓಂಕಾರೇಶ್ವರ", "ಪನ್ನಂಗಾಲತಮ್ಮೆ", "ಹೊನ್ನಮ್ಮನ ಕೆರೆ", "ಅಚ್ಚುನಾಯಕ" ಮೊದಲಾದ ಕೃತಿಗಳಿಂದ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಡಾ. ಕೊರವಂಡ ಅಪ್ಪಯ್ಯನವರು "ಕೊಡಗಿನ ಕುಲಾಚಾರ", "ಗೋರಕ್ಷಣೆ", ಎಂಬ ಕೃತಿಯನ್ನು ರಚಿಸಿದ್ದಾರೆ. ಪಿ. ಎಸ್. ರಾಮ ಕೃಷ್ಣನವರು "ದಿವ್ಯ ಜ್ಯೋತಿ". "ಗಾಯತ್ರಿಶಕ್ತಿ", "ಲಕ್ಷ್ಮೀಶನ ಕಾವ್ಯ", "ಕೊಡಗು ದರ್ಶನ", "ಕಾವೇರಿ ವಿಜಯ" ಮೊದಲಾದ ಕಾವ್ಯಗಳನ್ನು ಬರೆದಿರುತ್ತಾರೆ. ಹಾಗೆಯೇ "ಭಾರತೀ ಸುತ" ಕಾವ್ಯ ನಾಮದಿಂದ ಪ್ರಸಿದ್ಧರಾದ ಎನ್. ಆರ್. ನಾರಾಯಣ್ ರವರು "ನನ್ನ ಅತ್ತಿಗೆ", "ಹುಲಿ ಹಾಲಿನ ಮೇವು", "ಎಡಕಲ್ಲು ಗುಡ್ಡದ ಮೇಲೆ", "ಬೆಳ್ಳಿ ಮೂಡಿತು" ಎಂಬ ಪ್ರಸಿದ್ಧ ಕಾದಂಬರಿಗಳನ್ನು ಬರೆದು ಅಮೂಲ್ಯ ಕೊಡುಗೆ ನೀಡಿದ್ದಾರೆ. ಇವರ "ಹುಲಿ ಹಾಲಿನ ಮೇವು" ಮತ್ತು "ಎಡಕಲ್ಲು ಗುಡ್ಡದ ಮೇಲೆ" ಕಾದಂಬರಿಗಳು ಚಲನಚಿತ್ರವಾಗಿಯೂ ತುಂಬಾ ಪ್ರಸಿದ್ಧವಾಗಿದೆ.

ಕೆ.ಸಿ. ಮುತ್ತಣ್ಣ ಬಲಮುರಿ ಇವರು "ಜಗತ್ತಿಗೊಂದೇ ಕೊಡಗು" ಎಂಬ ಕೃತಿಯಿಂದ ಕೊಡಗಿನ ಹಿರಿಮೆಯನ್ನು ಸಾರಿದ್ದಾರೆ. ನೀಲಮ್ಮ ಎಂ. ಎ. ಇವರು "ಅಚ್ಚುನಾಯಕ", "ಅಂಕುರ" ಎಂಬ ಕಥಾಸಂಕಲನದಿಂದ ಕನ್ನಡ ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಜಿ. ಎಸ್. ಕೇಶವಾಚಾರ್ಯ ಇವರು "ಕೊಡಗಿನ ಒಡೆಯರು" ಎಂಬ ಗ್ರಂಥವನ್ನು ಬರೆದಿರುವರು. "ಕಾಕೆಮಾನಿ" ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಶ್ರೀಯುತ ಬಿ.ಡಿ. ಸುಬ್ಬಯ್ಯ ನವರು "ಬಿಲ್ಲುಬಾಣ ಮತ್ತು ಕಥಾಗುಚ್ಛ", "ಕೊಡಗಿನ ಇತಿಹಾಸ ಪುಟ" ಎಂಬ ಕೃತಿಗಳನ್ನು ಬರೆದರೆ, ಜಿ. ಟಿ. ನಾರಾಯಣ ರಾಯರು ವನಸುಮ, ನಕ್ಷತ್ರಲೋಕ, ಆಲ್ಬರ್ಟ್ ಐನ್‌ಸ್ಟೈನ್ ಜೀವನ ಚರಿತ್ರೆ ಎಂಬ ಹಲವಾರು ಕಥೆಗಳನ್ನು ಬರೆದಿರುವರು.

**ತಲೆಗೆ ಹೊಯ್ದದ್ದು ಕಾಲಿಗೆ ಇಳಿಯುವುದು**

ಡಾ. ಕುಶಾಲಪ್ಪಗೌಡರು. "ಗೌಡ ಕನ್ನಡ", "ಕನ್ನಡ ತಿಗುಳ ಕನ್ನಡ ಮತ್ತು ಸಮಾಜ". "ಕನ್ನಡ ಭಾಷೆ, ವ್ಯಾಕರಣಗಳ ಒಂದು ಅಧ್ಯಯನ" ಮೊದಲಾದ ಹಲವಾರು ಉತ್ತಮ ಕೃತಿಗಳನ್ನು ರಚಿಸಿದ್ದಾರೆ. ಕರುಣಾಕರನ್ ದಕ್ಷಿಣ ಭಾಷಾ ಕಥಾ ಮಂಜರಿಯನ್ನು, ಎಂ. ಬಿ. ಶಿವರಾಯರು "ನೆರಳಡಿಯಲ್ಲಿ", "ಬಳ್ಳಿ" ಎಂಬ ಕೃತಿಗಳನ್ನು ಕೆ. ಗೋವಿಂದ ರಾಯರು "ಬಾಪೂರವರ ಅಮರ ಕಥೆ", "ತಪಸ್ಸಿದ್ಧಿ" ಮುಂತಾದ ಕೃತಿಗಳನ್ನು ಬರೆದರೆ ಕೆ. ಎ. ತಂಗವೇಲು "ಹಾರುವ ತಟ್ಟೆಗಳ ಲೋಕದಲ್ಲಿ" ಲೇಖನವನ್ನು ಬರೆದು ಪ್ರಸಿದ್ಧರಾದರು. ಅಜ್ಜಮಾಡ ಮಂದಣ್ಣನವರು "ಜ್ಞಾನ ಸುಧಾ"ವನ್ನೂ, ಮೋಟನಾಳಿರ ಉತ್ತಪ್ಪನವರು "ದಿವ್ಯ ಜೀವನ ಭವ್ಯ ಮಾನವ" ಎಂಬ ಗ್ರಂಥವನ್ನು ಬರೆದರೆ, ಜಿ. ಯದುಮಣಿ ಯವರು "ಮಡಿಕೇರಿ ತಾಲೂಕು ದರ್ಶನ"ವನ್ನು, ರಾಜಶೇಖರ್ ರವರು "ಹಕ್ಕಿ ಹಾರುತ್ತಿದೆ" ಎಂಬ ಕಥೆಯನ್ನೂ, ಪುರುಷೋತ್ತಮ ಬಿಳಿಮಲೆಯವರು "ಸಿರಿ", "ಜಾನಪದ ಲೋಕದಲ್ಲಿ" ಮತ್ತು ಹಲವಾರು ಪ್ರವಾಸ ಕಥನಗಳನ್ನೂ, ಕಥಾ ಸಂಕಲನವನ್ನೂ ಬರೆದಿದ್ದಾರೆ.

ಹಾಗೆಯೇ ಹೊರಗಿನಿಂದ ಬಂದ ಕನ್ನಡಿಗರೇ ಆದ ಕೊಡಗಿನಲ್ಲಿ ಇದ್ದುಕೊಂಡು ಕೊಡಗಿನ ಸೌಂದರ್ಯ, ಜನ ಜೀವನದ ಬಗ್ಗೆ ಇನ್ನಿತರ ಕೃತಿಗಳಿಂದ ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡಿದವರು ಹಲವರಿದ್ದಾರೆ. ಅವರಲ್ಲಿ ಡಿ. ಬಿ. ರಾಮಚಂದ್ರ ಚಾರ್‌ರು ತಮ್ಮ "ಕೊಡಗು" ಕೃತಿ ಮತ್ತಿತರ ಹಲವಾರು ಲೇಖನ ಗಳಿಂದ ಪ್ರಖ್ಯಾತರಾಗಿದ್ದಾರೆ. ಜಿ. ಪಿ. ರಾಜರತ್ನಂರವರು ತಮ್ಮ "ಮಡಿಕೇರಿ ಮೇಲ್ ಮಂಜು" ಎಂಬ ಕೃತಿಯಿಂದ ಎಲ್ಲರ ಮನಸ್ಸನ್ನು ಗೆದ್ದಿದ್ದಾರೆ. ಪಂಜೆ ಮಂಗೇಶ ರಾಯರು ಕೂಡ ಹೊರಗಿನಿಂದ ಬಂದು ಮಡಿಕೇರಿಯಲ್ಲಿ ಅಧ್ಯಾಪಕರಾಗಿದ್ದು, ತಮ್ಮ ಸೇವೆಯೊಂದಿಗೆ ಕೊಡಗಿನ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಇವರ "ನಮ್ಮ ಕೊಡಗಿದು ನಮ್ಮದು" ಎಂಬ ಗೀತೆಯು ಕೊಡಗಿನ ಕಾವೇರಿಯಷ್ಟೇ ಪ್ರಖ್ಯಾತವಾಗಿ ಅವರ ಹೆಸರನ್ನು ಅಮರಗೊಳಿಸಿದ್ದಾರೆ. ಅಲ್ಲದೆ, ಜಿ. ಸೋಮಣ್ಣ, ಬಿ. ಎ. ಷಂಶುದ್ದೀನ್, ಬಿ. ಜೆ. ಅನಂತಶಯ, ಶ. ಗ. ನಯನ ತಾರ, ಗೀತಾನಾವೆಲ್, ಹೆಚ್. ಬಿ. ಅನಿಲ್, ಬಾರಿಯಂಡ ಜೋಯಪ್ಪ, ಕುಡೆಕಲ್ಲು ವಿದ್ಯಾಧರ ಮುಂತಾದವರು ಕೂಡ ಕೊಡಗಿನ ಸಾಹಿತ್ಯಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ. ಬೆಸೂರು ನಂಜಣ್ಣ ನವರು 640ಕ್ಕಿಂತ ಹೆಚ್ಚು ಕನ್ನಡ ಸಂಸ್ಕೃತಿ, ಪರಿಸರ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ. ಅಲ್ಲದೇ ಕನ್ನಡ ಸಂಸ್ಕೃತಿ, ವ್ಯಾಕರಣ, ಐಗೂರು ಇತಿಹಾಸ, ಮುಂಗೋಳಿ, ಚಂದನದ ಚೆಲುವಿನಿಂದ ಮುಂತಾದ ಕೃತಿಯಿಂದ ಸಾಹಿತ್ಯ ಕ್ಷೇತ್ರಕ್ಕೆ ತಮ್ಮ ಕಾಣಿಕೆಯನ್ನು ನೀಡಿದ್ದಾರೆ. ಹಾಗೆಯೇ ಬಡ್ಡೀರ ಚಂಗಪ್ಪನವರು ಸಿದ್ದಾಶ್ರಮ ಚರಿತ್ರೆ, ಏಡ್ಸ್ ರೋಗ ನಿವಾರಣೆಯ ಬಗ್ಗೆ ಲೇಖನವನ್ನು ಬರೆದರು.

ಸಿದ್ಧಿಗಣಪತಿ ಭಟ್ಟರು 10 ಸಾವಿರಕ್ಕೂ ಹೆಚ್ಚು ಅಮೂಲ್ಯ ಗ್ರಂಥಗಳನ್ನು ಹೊಂದಿರುವ ಜ್ಞಾನ ಕನ್ನಡ, ಜ್ಞಾನ ಭಂಡಾರದ ನಿಧಿಯಾಗಿದ್ದಾರೆ. ಹಾಗೆಯೇ ಎಸ್. ಎಸ್. ದೇವಿಪ್ರಸಾದ್ ರವರು "ಮೂರು - ದಾರಿಗಳು". "ಅಮರ ಸುಳ್ಯದ ಬಂಡಾಯ" ಹಾಗೂ ಇನ್ನಿತರ ಕೃತಿಗಳಿಂದ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಟಿ. ಎಸ್. ನಾರಾಯಣ ಆಚಾರ್ಯರು "ಕಾವೇರಿ ಮಹಾತ್ಮೆ" ಎಂಬ ಪುರಾಣಕೃತಿಯನ್ನು ಬರೆದಿರುವರು. 1994 ರಲ್ಲಿ ಶ್ರೀ ಪಟ್ಟಡ ಪ್ರಭಾಕರನವರು "ನನ್ನ ಕನಸಿನ ಮಡಿಕೇರಿ" ಚಿಕ್ಕ ಕೃತಿಯನ್ನು ಅರ್ಪಿಸಿರುವುದಲ್ಲದೇ, ಇತ್ತೀಚೆಗೆ ಬೈತಡ್ಕ ಜಾನಕಿಯವರು ಹಸೆಮಣೆ ಎಂಬ ಸಂಗ್ರಹ ಪುಸ್ತಕವನ್ನು ಸಾಹಿತ್ಯ ಲೋಕಕ್ಕೆ ನೀಡಿದ್ದನ್ನು ಸ್ಮರಿಸಬಹುದು.

ಸ್ವರ್ಗ ಎನ್ನುವುದು ಭೂಮಿಯ ಮೇಲೆ ಇದ್ದರೆ ಅದು ಕೊಡಗಿನಲ್ಲೇ ಇದೆ. ಕನ್ನಡ ಸಾಹಿತ್ಯ ಇಂದು ಸಹಸ್ರಾರು ಸಂವತ್ಸರಗಳ ಭವ್ಯ ಪರಂಪರೆಯಿಂದ ಸಿರಿವಂತನಾಗಿ, ಶಕ್ತಿ ಸೌಂದರ್ಯ ಯುಕ್ತರಾಗಿ, ಪ್ರಕಾಶಮಾನವಾಗಿ ಬೆಳಗುತ್ತಿದೆ. ಕನ್ನಡ ಸಾಹಿತ್ಯವು ಕರ್ನಾಟಕ ಪುಣ್ಯ ನದಿ ಕಾವೇರಿಯಂತೆ ಇಹಪರ ಸೌಖ್ಯದಾಯಿನಿ ಆಗಿದ್ದು ಲೋಕಪಾವನೆಯಾಗಿದೆ. ಸಾಹಿತ್ಯ ಕಾವೇರಿಯಲ್ಲಿ ಮಿಂದು ಧನ್ಯರಾಗಲು ಜಾತಿ-ಮತ-ಜನಾಂಗಗಳ ಭೇದವಿಲ್ಲದೆ ಎಲ್ಲರಿಗೂ ಮುಕ್ತ ಅವಕಾಶವಿದೆ. ಕೊಡಗಿನ ಶಾಲಾ ಕಾಲೇಜುಗಳಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳಿಗೆ ಮಾತೃ ಭಾಷೆ ಮತ್ತು ರಾಜ್ಯ ಭಾಷೆ ಎರಡರಲ್ಲೂ ಅರಿವು ಮೂಡಿ ಬರಲು ಪರಿಸ್ಥಿತಿ ಚೆನ್ನಾಗಿದೆ. ಹಾಗಾಗಿ ಕೊಡಗಿನಲ್ಲಿ ಹಿಂದಿನಿಂದಲೂ ಒಳ್ಳೆಯ ಕನ್ನಡ ಸಾಹಿತಿಗಳು ಮೂಡಿ ಬಂದು ಕೃತಿಗಳನ್ನು ಉಭಯ ಭಾಷೆಯಲ್ಲಿ ರಚಿಸಿದಂತೆ ವರ್ತಮಾನ ಮತ್ತು ಭವಿಷ್ಯದಲ್ಲೂ ಕೂಡ ಹೆಚ್ಚಿನ ಪ್ರಮಾಣದಲ್ಲಿ ಕನ್ನಡ ಸಾಹಿತ್ಯಕ್ಕೆ ನಿಷ್ಠೆಯಿಂದ ನುಡಿದು ಉತ್ತಮ ಕೃತಿಗಳನ್ನು ನೀಡುವಂತಾಗಲಿ ಎಂದು ಹಾರೈಸೋಣ.

"ಕನ್ನಡ ಸೇವೆಯಲ್ಲಿ ಮರುಗಿ ಹಣ್ಣಾದವರೆ, ಹಿರಿಯ ಕನ್ನಡ ಧೀರರೇ, ಕನ್ನಡದ ಮೇಲ್ಮೆಯೆ ಕನಸ-ನನಸಾಗಿಸುವ ತರುಣ ಕನ್ನಡ ವೀರರೆ, ಸ್ವಾಗತವು ನಿಮಗೆ" ಎಂಬ ತೀ. ನಂ. ಶ್ರೀ. ಯವರ ಕನಸು ನನಸಾಗಲಿ.

**ಕೆ. ಬಿ. ಮಿಲನ, ಭಾಗಮಂಡಲ**

---

## ನಗೆಹನಿ

**ಮೇಸ್ಟ್ರು** : ಗಜಲಕ್ಷ್ಮಿ ನೀನ್ ಹುಟ್ಟಿದ್ ಯಾವ ದಿನ?
**ಗಜಲಕ್ಷ್ಮಿ** : ಭಾನುವಾರ ಸಾರ್
**ರಾಜು** : ಅವ್ಳು ಸುಳ್ಳು ಹೇಳ್ತ ಉಟ್ಟು ಸಾರ್
**ಮೇಸ್ಟ್ರು** : ಅದರಲ್ಲಿ ಸುಳ್ಳು ಎಂತ ಉಟ್ಟು ಮಾರಾಯಾ
**ರಾಜು** : ಭಾನುವಾರ ರಜಾ ಸಾರ್..!

**ಮಹೇಶ** : ಬಿಸಿನೀರ್‌ಲಿ ನಾನ್ ಇಂದ್ ಕೈ ಸುಟ್ಟಕಂಡೆರಾ
**ಗಣೇಶ್** : ಅಯ್ಯೋ ಮುಠ್ಠಾಳ ನೀರ್ ಎಷ್ಟ್ ಬಿಸಿ ಉಟ್ಟುತಾ ಮೊದ್‌ಲೆ ಕೈ ಹಾಕಿ ನೋಡಕಾಗಿತ್ಲೆರಾ ನಿಂಗೆ.

– ಮುದ್ದಯ್ಯನ ರಘು ಬಸಪ್ಪ. ಮದೆನಾಡು

---

ತಲೆ ಹೋದ ಮೇಲೆ ಮುಂಡಾಸಿನ ಆಸೆ ಏನು?

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

ಲೇಖನ : ಶಂಕರನ ಬಸಪ್ಪ

ಧಾರಾವಾಹಿ - 22

ಹಿಂದೆ ನಡದದ್.......

ಮಿ. ರಾಜು ಬಾಂಬೆ ಡ್ರೆಸೆಸ್ ಅಂಡ್ ಗಾರ್ಮೆಂಟ್ ಫ್ಯಾಕ್ಟರಿನ ಸಿ.ಬಿ.ಐ. ಇನ್‌ಸ್ಪೆಕ್ಟರ್ ಆಗಿ ಸರ್‌ಪ್ರೈಜ್ ಚೆಕಿಂಗ್ ಮಾಡಿ ಆದ ಮೇಲೆ ಮಾರನೆ ದಿನ ಅರಸಿಕೆರೆಲಿರುವ ಬಾವನ ಮನೆಂದ ವಾಪಸ್ ರಾತ್ರಿ ಬಸ್‌ಲಿ ಬಾಕಾಕನ ಕಾಡ್ ರಸ್ತೆಲಿ ದರೋಡೆ ನಡೆದದೆ. ಅವರ ನೆಲ್ಲಾ ಹೊಡ್ದ್ ಹಿಡ್ದ್ ಸುಸ್ತಾದ ಪ್ರಯಾಣಿಕರ ಪ್ರಾಣನ, ಹಣನ ಉಳ್ಸಿ ಈ ಕಳ್ಳರನ್ನೆಲ್ಲಾ ಕಿಕ್ಕೇರಿ ಪೋಲಿಸ್ ಸ್ಟೇಷನ್ನಿಗೆ ಒಪ್ಪಿಸಿದೆ. ಹಂಗಾಗಿ ಆ ಬಸ್ಸ್‌ನ ಜನ ಇಂವಂಗೆ ಬಹುಮಾನ ಹಣ, ಚಿನ್ನದ ಒಡವೆ ಹಿಂಗೆಲ್ಲಾ ಕೊಟ್ಟವೆ. ಮೈಸೂರು ಕಡೆಗೆ ಒಂದ್ ಲಕ್ಷುರಿ ಬಸ್‌ಗೆ ಹತ್ತಿದೆ...........

ಮುಂದಕೆ...........

ಮಿಸ್ಟರ್ ರಾಜು ತನ್ನ ಲಾಡ್ಜ್‌ಂದ ದಿನಾ ಹೊರಗೆ ಹೊರಡಿಕಾಕನ ಅಲ್ಲೆ ಎದುರುಗಡೆ ಇರುವ ಪವನ್ ಬ್ರೋಕರ್ ಸುರರಾಂ ಮಾರ್ವಾಡಿನ ಗಿರ್ವಿ ಅಂಗಡಿ ಕಡೆಗೆ ತಿರುಗಿ ನೋಡ್ದು ರೂಢಿ ಆಗಿ ಹೋಗಿತ್. ಹಂಗೇ ಆ ಮಾರ್ವಾಡಿ ಕೂಡಾ ಇಂವ ದಾಟಿಕಾಕನ ಒಮ್ಮೆ ತನ್ನ ಕನ್ನಡಕದ ಮೇಲಿಂದ ಕತ್ತೆತ್ತಿ ನೋಡಿ ಹಲ್ಲ್ ಬುಡ್ತಿತ್. ಹಿಂಗೇ ಇವರಿಬ್ಬರ ಪರಿಚಯ ದೂರಂದಲೇ ಮಾತ್‌ಕಥೆ ಇಲ್ಲದ ಬರೇ ಕಣ್ಣ್ ಭಾಷೆಲೇ ಪರಿಚಯ ಆಗಿ ಹೋಗಿತ್ತ್.

ಯಾಕೆತ್ತೇಳಿರೆ ಈ ರಾಜು ಅಂವನ ಅಂಗಡಿ ಕಡೆ ನೋಡ್ದಾಗಲೆಲ್ಲಾ ಈ ಸಾಹುಕಾರನೊಟ್ಟಿಗೆ ಒಬ್ಬಲ್ಲಾ ಒಬ್ಬ ಗಿರಾಕಿಗಳದು ಗಲಾಟೆ ನಡೆಯುತ್ತಿರುತ್ತಿತ್ತ್. ಇಂವನ ಬಡ್ಡಿ ಲೆಕ್ಕಚಾರದೇ ಯಾಗೋಳು ತಕರಾರ್. ಇಂವ ಬಡ ಜನರ ಒಡವೆ, ವಸ್ತುಗಳ್ನ ಹಣಕ್ಕೋಸ್ಕರ ಅಡ ಇಟ್ಟಿದ್ದವೆ. ಅದರ ಮೇಲೆ ಈ ಮಾರ್ವಾಡಿ ಕೈಯಿಂದ ಹಣನ ಪಡ್ದ್‌ಕಂಡಿದ್ದವೆ. ಆದ್ರೇ ಈ ಮಾರ್ವಾಡಿ ಹಣ ಕೊಡಿಕಾಕನೇ ಒಂದ್ ತಿಂಗಳ ಬಡ್ಡಿನ ಹಿಡ್ಕಂಡೇ ಕೊಡ್ದು. ಮತ್ತೆ ಅವು ಬುಡ್ಸಿಕಂಬಕೆ ಬಂದಾಕನ ಬಡ್ಡಿಗೆ ಸುಸ್ತಿ ಬಡ್ಡಿ ಲೆಕ್ಕ ಹಾಕಿ ಅದರ ಮೇಲೆ ಮೊದಲ ತಿಂಗಳದೂ ಲೆಕ್ಕ ಹಾಕಿ ಬಡ್ಡಿಗೆ ಅಸಲ್‌ಗಿಂತ ಜಾಸ್ತಿ ಆಗಿ ಹೋಗಿದ್ದದೆ. ಈ ಮಾರ್ವಾಡಿನ ಲೆಕ್ಕ ಸಾಲ ತಕಂಡ ಜನಕ್ಕೆ ಅರ್ಥ ಆಗದೆ ಕೊನೆಗೆ ತಮ್ಮ ಒಡವೆ, ವಸ್ತುಗಳ ಬುಡ್ಸಿಕಂಬಕೆ ಆಗದೆ ಸಿಟ್ಟ್ ಬಂದಿದ್ದದೆ.

ಹಿಂಗೇ ಎರಡ್ ದಿನದ ಹಿಂದೆ ಈ ಜನರ ಗಲಾಟೆ ನಡಿಯುತಿರ್‌ಕಾಕನ ಈ ಗಲಾಟೆ ಕೈ ಕೈ ಮಿಲಾಯಿಸಿಕಂಬಕೆ ಶುರು ಆಗಿತ್. ಅಷ್ಟೊತ್ತಿಗೆ ಮಿ. ರಾಜು ಅಲ್ಲಿಗೆ [illegible] ಹೋಗಿ ಆ ಜನರನೆಲ್ಲಾ ಸಮಾಧಾನ ಮಾ[illegible] ಬಡ್ಡಿಲೆಕ್ಕನ ಹಾಕಿಸಿ ಎಲ್ಲವಕೂ ಸಮಾಧಾನ ಆಗುವಂಗೆ ವ್ಯವಹಾರನ ಮುಗ್ಸಿ ಕಳ್ಸ್‌ಕೊಟ್ಟಿತ್. ಇದಾದ ಮೇಲೆ ಈ ಸುರರಾಂ ಶೇಟ್ ರಾಜುನ ಕಂಡರೆ ಬಹಳ ಮಾರ್ಯಾದಿಲಿ ಬೊಗ್ಗಿ ರಾಂರಾಂ ಶೇಟ್‌ತ್ತೇಳಿ ನಮಸ್ಕಾರ ಮಾಡಿಕೆ ಶುರು ಮಾಡಿತ್ತ್. ಹಂಗಾಗಿ ಮಿಸ್ಟರ್ ರಾಜು ನೆನ್ನೆ ದಿನ ಅರಸಿಕೆರೆ ರಸ್ತೆಲಿ ಬಸ್ ದರೋಡೆ ನಡ್ದದರ ಬಚಾವ್ ಮಾಡಿದಕ್ಕೆ ಬಹುಮಾನ ಆಗಿ ಸಿಕ್ಕಿದಂತಹ ಸುಮಾರು ಚಿನ್ನದ ಒಡವೆಗಳ ಈ ಮಾರ್ವಾಡಿ ಹತ್ರ ಗಿರವಿ ಇಟ್ಟ್ ಹಣ ಕ್ಯಾಷ್ ಮಾಡಿಕಂಬಕೆ ಈ ಸುರರಾಂ ಅಂಗಡಿಗೆ ಬಾತ್.

ರಾಂ ರಾಂ ಸುರರಾಮ್‌ಶೇಟ್‌ಗೆ ಹೇಳ್‌ಕನ ಆ ಶೇಟ್‌ಜಿ ಕೂಡಾ ಬಹುತ್ ಖುಷ್ ಹೋಗಯಾ ರಾಂರಾಂ ರಾಜೂಜೀ ತಾ ಹೇಳ್ತ್. ನೋಡಿ ನನ್ನ ಹತ್ರ ಇರುವ ಈ ನಾಲ್ಕು ರಿಂಗ್ಸ್ ಎರಡ್ ಜೊತೆ ಗಟ್ಟಿ ಬಳೆಗ, ಎರಡ್ ರೋಪ್ ಚೈನ್ ಇಷ್ಟನ್ನು ಅರ್ಜೆಂಟ್‌ಗೆ ನಿಮ್ಮ ಹತ್ರ ದುಡ್ಡಿಗೆನೆ ನಂಗೆ ಈಗ 20 ಸಾವಿರ ರೂಪಾಯಿ ಬೇಕ್. ಒಂದು ವಾರದ ಒಳಗೆ ನಾನ್ ಇದರ ಬುಡ್ಸಿಕಂಡನೆ. ಖಾಲಿ ಎಕ್ ಅಪ್ತಾ ಕೇಲಿಯೆ ಮೇರೆಕೊ ಪೈಸಾ ಚಾಯಿಯೆ ತಾ ಹೇಳ್ತ್. ಆ ಮಾರ್ವಾಡಿ ಇಷ್ಟೆಲ್ಲಾ ಒಡವೆಗಳ ನೋಡಿ ಖುಷಿ ಆಗಿ ಹೋತ್. ಒಂದೊಂದು ಒಡವೆಗಳ್ನ ತೆಗ್ದ್ ಸಾಣೆಕಲ್ ಮೇಲೆ ಉಜ್ಜಿ ಉಜ್ಜಿ ಅದ್‌ಕ್ಕೆ ಎಸಿಡ್ ಸುರ್ದ್ ಅಪ್ಪಟ ಚಿನ್ನ ಹೌದೋ ಇಲ್ಲೆನಾ ತಾ ನೋಡಿ ಗ್ಯಾರೆಂಟಿ ಮಾಡಿಕಂಡತ್.

ಅಯ್ಯೋ ಶೇಟ್‌ಜೀ ಇದೆಲ್ಲಾ ಅಪ್ಪಟ ಅಸಲೀ ಚಿನ್ನಾನೇ ನಿಂಗೆ ಮೋಸ ಮಾಡ್ದಂತ ಹಲ್ಕಾ ಕೆಲ್ಸ ಎಲ್ಲಾ ನನ್ನ ಹತ್ರ ಇಲ್ಲೆ ಗೊತ್ತಾತಾ. ಆತ್. ಆತ್, ಈಗೊಂದು ಸಾರಿ. ನೀನ್ ಬೇಕಾದ್ರೆ ಎಲ್ಲಾ ಒಡವೆಗಳ ಹಂಗೆ ಉಜ್ಜಿ ಉಜ್ಜಿ ನೋಡಿಕಂಡ್ ಬುಡ್. ಆದ್ರೇ ನಾನ್ ಬಂದಾಗಲೆಲ್ಲಾ ಇದೇ ಚಿನ್ನನ ಪುನಃ ಪುನಃ ಸವುದು ನೋಡುದು ಮಾತ್ರ ಬೇಡ ಗೊತ್ತಾತಾ?ತಾ ಹೇಳ್ತ್.

ರಾಜು ಬೈಯ್ಯಾ ನಿಮ್ಬುಕೆ ಹೇಳೂದೂ ಸಚ್ ಐತೆ. ನಮುದು ನಿಮ್ಮುದೂ ವಿಶ್ವಾಸ ಅಲಗ್ ಐತೆ. ಮತ್ತೇ ವ್ಯವಹಾರ ಮಾತ್ರ ಬೇರೆ ಐತೆ. ಇದು ಏಕ್ ಬಾರ್ ಮುಂದಕ್ಕೆ ನೋಡಿಬುಟ್ರೆ ಮುಂದಕ್ಕೆ ಅಚ್ಛಾ ಐತೆ. ಹೌದ ಅಲ್ವಾತಾ ಶೇಟ್ ಹಲ್ಲ್ ಕಿರ್ದ್ ಕೇಳ್ತ್. ಆಮೇಲೆ ಈ ರಾಜು ಬೈಯಂದು ಪೂರ್ತ ಅಡ್ರಾಸ್‌ನ ಕೇಳಿ ರಶೀದಿ ಬುಕ್‌ಲಿ ಬರಕಂಡ್. ಇಪ್ಪತ್ತು ಸಾವಿರಕ್ಕೆ ಒಂದು ತಿಂಗಳ ಮುಂಗಡ ಹಣದ [illegible]ನ ಹಿಡ್ಕಂಡೇ 19200/- ರೂಪಾಯಿನ ಲೆಕ್ಕ ಹಾಕಿ ರಾಜು[illegible] ಕೈಗೆ ಕೊಡ್ತ್. ಮಿ. ರಾಜು ಈ ಹಣನ ಮರು ಮಾತಾಡದೆ ಇಸ್‌ಕಂಡತ್.

ಇಷ್ಟ್ ವ್ಯವಹಾರನ [illegible]ಕನ [illegible]. ರಾಜು ಈ ಮಾರ್ವಾಡಿನ ವ್ಯವಹಾರ್ರಗಳ ಅ[illegible] ನೋಡ್ತ್. ಇಂವ ಗರೀಬ ಜನರಿಂದ ಹಣಕ್ಕೋಸ್ಕರ ಗಿರವಿ ಇ[illegible]ಕಂಡ್ ಷೋಕೇಸ್‌ಲಿ [illegible]ಸಿಟ್ಟ ತಾರವರಿ ಚಿನಾ ಬರಣಾಗಳ ಒಡವೆ ವಸ್ತುಗಳ ಒಂದು ಸರ್ತಿ [illegible]ಲಿ ಬಹಳ ಬೇಜಾರ್ ಮಾಡಿಕಂಡತ್.

ಮಕ್ಕಳನ್ನು ಕರಕೊ[illegible]ಂ ಗೆ ಹೋ[illegible], ಹೆಂಡತಿಯನ್ನು ಕರಕೊಂಡು ಪೇಟೆಗೆ ಹೋಗಬಾರದು

ಇದರಲ್ಲಿ ಅರ್ಧ ಭಾಗ ಚಿನ್ನದ ಸರಗಳಲ್ಲಿ ಹೆಂಗಸರ ಮಾಂಗಲ್ಯ ಸರಗಳೇ ಹೆಚ್ಚಾಗಿ ಷೋಕೇಸ್‌ಲಿ ಜೋತಾಡ್‌ತಿತ್ತ್. ಏನ್ ಶೇಟ್‌ಜೀ ಇಷ್ಟೆಲ್ಲಾ ಚಿನ್ನಾಭರಣಗಳೆಲ್ಲಾ ಸೀನ್ ಕೊಡುವ ಹಣಕ್ಕೆ ಬದ್‌ಲ್‌ಗೆ ಮಡಗಿಸಿಕಂಡದಾ? ಪಾಪ ಆ ಜನ ಇದೆಲ್ಲದರ ವಾಪಾಸ್ಸ್ ಬುಡ್ಸಿಕಂಡ್ ಹೋದವೆನಾ? ಅಲ್ಲಾ ಇವು ಇದರ ಆಸೆನ ಮರ್ತೆ ಬುಟ್ಟವೆನಾ? ತಾ ನಗೆ ಆಡಿಕಂಡ್ ಮಿ. ರಾಜು ಕೇಳ್ತ್.

ಇಲ್ಲಾ ಇಲ್ಲಾ ರಾಜು ಬಯ್ಯಾ. ಇಲ್ಲಿನ ಜನ ನನ್ನ ಹತ್ರ ಒಂದ್ಸಲ ಅವರ ಚಿನ್ನನ ನನ್ನ ಹತ್ರ ಇಟ್ಟ್‌ಬುಟ್, ಹಣಾನಾ ತಕೊಂಡು ಹೋದ ಮ್ಯಾಕೆ ಆಮ್ಯಾಲೆ ಅವು ಇದರ ಬಡ್ಡಿ ಕಟ್ಟಿಕಾಗಲೀ, ಅಸಲ್ ಕಟ್ಟಿಕಾಗಲೀ ಇತ್ತ ಬಾದುಲೆ ನೋಡಿ. ಆಮ್ಯಾಕೆ ನಾನೇ ಒಂದೆರಡು ಪಪ ಲಾಯರ್‌ಂದೆ ಹರಾಜ್ ನೋಟಿಸ್ ತಾ ಕಳ್ಸಿನೆ. ಆಗ ಅವೆಲ್ಲಾ ಕೈಲಿ ದುಡ್ಡಿಲ್ಲದೆ ಹೆದ್ರ್‌ಕಂಡ್ ಅವು ಮಡಗಿದ ಈ ಚಿನ್ನದ ಒಡವೆಗಳ ಸಂಗತಿಗೇ ಬಾದುಲೆ. ಆಮೇಲೆ ಸ್ವಲ್ಪ ದಿನ ನಾನ್ ನೋಡಿ ಈ ಎಲ್ಲಾ ಆಭರಣಗಳ್ನ ನನ್ನ ಹಣಕ್ಕೆ ಮತ್ತೆ ಬಡ್ಡಿ ಹಣಕ್ಕೋಸ್ಕರ ಹರಾಜ್ ಮಾಡಿ ಬುಟ್ಟತ್ತೇಳಿ ಎಲ್ಲಾ ಆಭರಣಗಳ ಒಟ್ಟಿಗೆ ಕರಗಿಸಿ, ಚಿನ್ನದ ಗಟ್ಟಿಗಳ ಮಾಡಿ ಇಟ್ಟ್‌ಕಂಡನೆ. ವಾಯಿದೆ ಮೀರಿದ ಮೇಲೆ ಯಾವ್ನೊಬ್ಬ ನನ್ನ ಬಚ್ಚಾಗ ಇದರ ಬಗ್ಗೆ ನನ್ನ ಹತ್ರ ಕೇಳಿಕೆ ಬಾದುಲೆ ನೋಡಿ. ಅದಕ್ಕೋಸ್ಕರನೇ ನಾನೇ ಈ ಜನ ಹಿಂಗೇ ಮಾಡುದು ತಾ ಲೆಕ್ಕ ಹಾಕಂಡ್, ಅವುಕೆಲ್ಲಾ ಅಸಲ್ ಬಡ್ಡಿ ಸೇರಿದ್ರೂ ಅರ್ಧ ಬೆಲೆ ಆಗುವ ಹಣನ ಕೊಡ್ದು. ಇದರಲ್ಲಿ ನಂದೇನೂ ದೋಖಾ ಐತಾ? ನಂದು ಸಚ್ ಅಲ್ವಾ? ನೀವೇ ಹೇಳಿ ರಾಜು ಬೈಯ್ಯಾ ಅವರು ಅವರ ಸಾಮಾನುಗಳ ಇಡುತ್ತಾರೆ ನಾನು ಅವರಿಗೆ ಹಣ ಕೊಟ್ಟನೆ. ಹಣ ನಂಗೆ ಬೇಕ್ ಅಲ್ವಾ? ನಂದು ಸಚ್ ಅಲ್ವಾ?

ಶೇಟ್‌ಜೀ ನಿಂದೇನೂ ಮೋಸ, ದಗಾ ಇಲ್ಲೇ ಎಲ್ಲಾ ಬರೇ ಹಗಲು ದರೋಡೆ ಅಷ್ಟೇ. ಬೆಣ್ಣೆಂದ ಕೂದ್ಲ್‌ನ ಎಳ್ದಂಗೆ ನೋವಿಲ್ಲದಂಗೆ ನಯವಂಚನೆ ಆದೆ ಅಷ್ಟೆ. ಅದ್ ಇರ್ಲಿ ನಾನ್ ಒಂದ್ ನಾಲ್ಕು ದಿನ ಬುಟ್‌ಕಂಡ್ ಪುನಃ ಬನ್ನೇತ್ತೇಳಿ ಅಲ್ಲಿಂದ ಹೊರಟಿತ್.

ಈ ಮಾರ್ವಾಡಿಗೆ ನಾನ್ ಮೋಸ ಮಾಡಿರೂ ನಂದ್ ಅನ್ಯಾಯ ಆದುಲ್ಲೆ. ಯಾಕೆತ್ತೇಳಿರೆ ಇಂವ ಸಾವಿರಾರು ಬಡಜನರ ಒಡವೆ, ವಸ್ತ್ರ ಹಣನೆಲ್ಲಾ ಅವರ ಕಣ್ಣ್‌ಮುಂದೇನೇ ಅವರ ಚಿತ್ತ ಶಕ್ತಿಗೆ ಗೊತ್ತಾಗದಂಗೇ ಬಡ್ಡಿಗೆ ಸುಸ್ತಿ ಬಡ್ಡಿತ್ತೇಳ್ಟು ಹೊರೆನ ಏರ್ಸಿ ಹಗಲು ದರೋಡೆ ಮಾಡುತಾ ಉಟ್ಟು. ಹಂಗಾಗಿ ಇಂವ ಬರೀ ಐದು ವರ್ಷಲಿ ಅಂದಾಜು ಎರಡು ಕೋಟಿ ಆಸ್ತಿನ ಸಂಪಾದಿಸಿಟ್ಟು. ಇದೆಲ್ಲಾ ಅನಿವಾರ್ಯದಿಂದ ಬಂದ ಬಡವರ ಸುಲಿಗೆ ಹಣದ್ದ್. ಇಂವನ ನಾನ್ ಸ್ವಲ್ಪ ಮಟ್ಟಿಗಾದ್ರೂ ಏಮಾರ್ಸಕ್ಕುತಾ ಲೆಕ್ಕ ಹಾಕಂಡತ್. ಹಂಗೇ ಯೋಚನೆ ಮಾಡಿಕಾಕನ ಮಿ. ರಾಜುಗೆ ಒಂದ್ ಐಡಿಯಾ ತಲೆಗೆ ಹೊಳ್ತ್.

ಎರಡ್ ದಿನ ಬುಟ್ಟಿಕಂಡ್ ಈ ರಾಜು ಬೈಯ್ಯಾ ಸುರರಾಂನ ಅಂಗಡಿಗೆ ಬಾತ್. ರಾಂ ರಾಂ ಸುರರಾಂ ಶೇಟ್‌ಜೀ. ನಂಗೆ ಯಾವುದೋ ಸ್ವಲ್ಪ ಹಣ ಎಡ್ಜಸ್ಟ್ ಆತ್. ಹಂಗಾಗಿ ನಾನ್ ನನ್ನ ಒಡವೆಗಳ ಬುಡ್ಸಿಕಂಬಕೆ ಬಂದೆ ತಾ ಹೇಳಿ 20,000 ರೂಪಾಯಿಯ ಕಂತೆನ ಅಂವನ ಮುಂದೆ ಮಡಗಿತ್. ಸುರರಾ ಸೇಟ್‌ಗೆ ಈ ರಾಜು ಬೈಯ್ಯಾನ ವ್ಯವಹಾರನ ನೋಡಿ ಬಹಳ ಖುಷಿ ಆಗಿ ಹೋತ್. ಯಾಕೆತೇಳಿರೆ ಬರೀ ಎರಡ್ ದಿನಕ್ಕೆ 800 ರೂ. ಬಡ್ಡಿ ಸಂಪಾದಿಸಿದಂಗೆ ಆಗಿತ್ತ್. ಹಂಗಾಗಿ ಶೇಟ್ ಬರೇ ಉಪಚಾರಕೋಸ್ಕರ ಹಲ್ಲ್ ಬುಟ್ಟು, ನಗೆ ಆಡಿ ಕ್ಯಾ ರಾಜು ಬಯ್ಯಾ ಬರೇ ದೋ ದಿನ್ ಕ್ಯೇಲಿಯೇ ಒಂದು ತಿಂಗಳ ಬಡ್ಡಿನ ನಾನ್ ನನ್ನ ಲೆಕ್ಕಲಿ ಬರ್ದ್ ಬುಟ್ಟೊಳೊಳೆಲ್ಲಾ? ಛೇ ಚೇ ಅದೇನ್ ಅಷ್ಟ್ ಅರ್ಜೆಂಟ್ ನಿಮಿಗೆ ಹಣಾದ್ ಅರ್ಜೆಂಟ್ ಇತ್ತಾತಾ ಕೈ ಮೈ ಉಜ್ಜಿಕಂಡ್ ಕೇಳ್ತ್. ಅಯ್ಯೋ ಶೇಟ್‌ಜೀ ನಾನ್ ಇಷ್ಟ ಸಣ್ಣ ವಿಷಯಕ್ಕೆಲ್ಲಾ ತಲೆ ಕೆಡ್ಸಿ ಕಂಬೋದಿಲ್ಲೆ. ನಂಗೆ ಅರ್ಜೆಂಟಾಗಿ ಹಣ ಬೇಕಾಗಿತ್ತ್. ಆಗ ನೀವ್ರ ಹಣಾನ ಕೊಟ್ರಿ. ನಂದ್ ಯಾವುದೋ ಅರ್ಜೆಂಟ್ ಕೆಲ್ಸಕ್ಕೆ ಸಹಾಯ ಆತ್. ಹಿಂಗೆ ನಂಗೆ ಒಮ್ಮೊಮ್ಮೆ ಹಣದ ಅರ್ಜೆಂಟ್ ಬಂದ್ ಬುಟ್ಟದೆ ನೋಡಿ. ಸರಿ ಇನ್ನು ಮುಂದೆ ನನ್ನ ವ್ಯಾಪಾರ ವ್ಯವಹಾರಕ್ಕೆ ಆಗಾಗ ಹಣದ ಅರ್ಜೆಂಟ್ ಬಿದ್ದದೆ ಆಗ ನಿಮ್ಮ ಹತ್ರ ಖಂಡಿತ ಬನ್ನೆ. ನೀವು ತಿಂಗಳ ಬಡ್ಡಿ ಹಿಡ್‌ಕಂಡರೂ ನಾನೆಲ್ಲಾ ಅದ್‌ಕೆ ಬೇಜಾರ್ ಮಾಡಿಕಂಬೊವ ಅಲ್ಲ ಗೊತ್ತಾತಾ ಶೇಟ್ ನಾನ್ ಬರ್ಲಾ ತಾ ಹೇಳಿ ಆ ಶೇಟ್ ಕೊಟ್ಟಿದ ರಾಜುನ ಚಿನ್ನದ ಒಡವೆಗಳ ಪ್ಯಾಕೆಟ್‌ನ ಜೋಬೊಳೊಗೆ ಸೇರಿಸಿ ಅಲ್ಲಿಂದ ಹೊರಟಿತ್.

ಇದನೆಲ್ಲಾ ಕೇಳಿದ ಸುರರಾಂ ಶೇಟ್‌ಗೆ ಈ ರಾಜುನ ಮೇಲೆ ಒಂದ್ ತರಹದ ಹೆಚ್ಚ್ ಅಭಿಮಾನ ಮೂಡ್ತ್. ಇಂತಹ ಗಿರಾಕಿ ನಂಗೆ ಸಿಕ್ಕಿದ್ ನನ್ನ ಅದೃಷ್ಟತ ಗ್ಯಾನ ಮಾಡ್ತ್. ಯಾಕೆತ್ತೇಳಿರೆ ಎರಡು ದಿನಕೆ, ವಾರಕೆ, ಹಿಂಗೇ ಇಂವ ಬಂದ್ ಹೋದರೆ ಹೆಂಗಿದ್ದರೂ ಒಂದ್ ತಿಂಗಳ ಬಡ್ಡಿನ ಹಾಕಿರೂ ಬೇಜಾರ್ ಮಾಡಿ ಕಂಬೋದಿಲ್ಲೆಲ್ಲಾ?

ಮಿ. ರಾಜು ಸುರರಾಂ ಅಂಗಡಿಂದ ಹೊರಟಂವ ನೆಟ್ಟಂಗೆ ತನ್ನ ಲಾಡ್ಜ್‌ಗೆ ಬಾತ್. ಅಲ್ಲಿ ಸ್ವಲ್ಪ ಹೊತ್ ಕುದ್ದಿದ್ದ್, ಮುಂದಿನ ಕಾರ್ಯಚರಣೆಯ ಬಗ್ಗೆ ಒಂದ್ ಸ್ಕೆಚ್‌ನ ಹಾಕಂಡತ್. ಆಮೇಲೆ ಅಲ್ಲಿಂದ ಎದ್ದ್ ನೆಟ್ಟಂಗೆ ಅಶೋಕ ರೋಡ್‌ಲಿ ಇರುವ ತುಳಸಿ ಜ್ಯೂಲರ್ಸ್ ಅಂಗಡಿಗೆ ಹೋತ್. ಅಲ್ಲಿ ತಾನು ಜೊತೆಗೆ ತಕಂಡ್ ಹೋಗಿದ್ದ ಎರಡ್ ಜೊತೆ ಗಟ್ಟಿ ಬಳೆಗಳ್ನ, ಮತ್ತೆ ಒಂದ್ ಜೊತೆ ರೋಪ್‌ಚೈನ್‌ಗ, ಹಂಗೇ ಮೂರು ಉಂಗುರಗಳ ಆ ಅಂಗಡಿ ಸಾಹುಕಾರನ ಮುಂದೆ ಮಡಗಿ ಹೇಳ್ತ್. ಶೆಟ್ರೇ ನಂಗೆ ಅರ್ಜೆಂಟಾಗಿ ಇಷ್ಟ್ ಒಡವೆಗಳಂತದ್ದೇ ಡಿಟೋ ಡಿಸೈನ್ ಬೆಳ್ಳಿ ಒಳಗೆ ರೆಡಿಮಾಡಿ ಅದಕ್ಕೆ ಚಿನ್ನದ ನೀರ್‌ನ ಬುಡ್ಸಿ ಒಳ್ಳೆ ಲಾಯಕಲಿ ಮಾಡಿ ಕೊಡೋಕು ಆತಾ. ಇದಿಷ್ಟು ಒಡವೆಗ ನಮ್ಮ ಕಡೆಯ ಒಬ್ಬ ಬಡ ಕುಟುಂಬದವಿಕೆ ಬೇಕಾಗುಟ್ಟು. ಸ್ವಲ್ಪ ನೀವೇ ಇದರ ಬಗ್ಗೆ ಜವಾಬ್ದಾರಿ ತಕಂಡ್. ನಂಗೆ ಇನ್ ಐದ್ ದಿನಲಿ ರೆಡಿ ಮಾಡಿ ಕೊಡೋಕು. ತಕಣಿ. ಇದಕ್ಕೆ ಆಗುವ ಕೂಲಿಗೆ ಅಡ್ವಾನ್ಸ್

19ನೇ ಪುಟಕ್ಕೆ

# ವರದಕ್ಷಿಣೆ ಮತ್ತು ಸಜೀವ ದಹನ

ಕರ್ನಾಟಕದಲ್ಲಿ ಕೊಡಗು ಒಂದು ಚಿಕ್ಕ ಜಿಲ್ಲೆ. ಜಿಲ್ಲೆ ಚಿಕ್ಕದಾದರೂ ಇದರ ಕೀರ್ತಿ ದೊಡ್ಡದಾಗಿದೆ.

ಮಾನವ ಸಾಹಸ ಜೀವಿ. ಒಂದಲ್ಲ ಒಂದು ಸಾಧನೆಯನ್ನು ಹಂತ ಹಂತವಾಗಿ ಮಾಡುತ್ತಾ ಹೋಗುತ್ತಾನೆ. ಇಂತಹ ಮಾನವನಿಗೆ "ಮದುವೆ" ಎಂಬುದು ಜೀವನದ ಒಂದು ಹಂತವಾಗಿದೆ. ಈ ಹಂತವನ್ನು ತಲುಪುವುದು ಅಂಥಹ ಕಷ್ಟವೇನು ಅಲ್ಲದಿದ್ದರೂ ಕಷ್ಟ-ಸುಖವನ್ನು ಅನುಭವಿಸಲು ಸದಾ ಸಿದ್ಧವಿರಬೇಕು. ಶ್ರೀಮಂತ ವರ್ಗಕ್ಕೆ ಕಷ್ಟ ಕಾಣದಿದ್ದರೂ, ಮಧ್ಯಮವರ್ಗದವರು ಸ್ವಲ್ಪ ಕಷ್ಟಪಡಬೇಕಾಗುತ್ತದೆ.

ಸಾಧಾರಣವಾಗಿ ಮದುವೆ ಮಾಡುವಾಗ ಆಸ್ತಿ ಅಂತಸ್ತು ಬಯಸುವುದು ಸಹಜ. ಹೆಣ್ಣನ್ನು ಮದುವೆ ಮಾಡುವಾಗ ತಮಗಿಂತ ಶ್ರೀಮಂತರಿಗೂ, ಹೆಣ್ಣನ್ನು ತರುವಾಗ ತಮಗಿಂತ ಕೆಳ ಅಂತಸ್ತಿನವರನ್ನು ಆಗಬೇಕೆಂದು ಹಿರಿಯರ ಮಾತು ಇದು ಸತ್ಯ.

ಹಾಗೆಯೇ ಮದುವೆಯ ವಯಸ್ಸು ಸರ್ಕಾರ ನಿಗದಿ ಪಡಿಸಿದಂತೆ ಹೆಣ್ಣಿಗೆ ಕನಿಷ್ಠ 18 ಹಾಗೂ ಗಂಡಿಗೆ ಕನಿಷ್ಠ 21 ವಯಸ್ಸು ಇರಬೇಕು. ಇದನ್ನು ಯಾರೂ ಗಮನಿಸುವುದಿಲ್ಲ. ವರನೊಬ್ಬ ಇದ್ದಾನೆಂದು ಗೊತ್ತಾದರೆ ತಮ್ಮ ಮಗಳನ್ನು ಮದುವೆ ಮಾಡಿ ತಮ್ಮ ಮೇಲಿನ ಜವಾಬ್ದಾರಿಯನ್ನು ಕಡಿಮೆ ಮಾಡಿ ಕೊಳ್ಳುವವರು ಹೆಚ್ಚು. ಕೊಡಗಿನಲ್ಲಿ ಗೌಡ ಹಾಗೂ ಕೊಡವ ಜನಾಂಗದಲ್ಲಿ ಮದುವೆಯ ವಯಸ್ಸು ಹಾಗೂ ರೀತಿ ಬೇರೆ ಜಿಲ್ಲೆಯವರಿಗೆ ಹೋಲಿಸಿದರೆ ಬಹಳ ಉತ್ತಮವಾಗಿದೆ. ಹಾಸನ, ಮಂಡ್ಯ, ಮೈಸೂರು, ಬೆಂಗಳೂರು ಇತರೆಡೆ ಸಾಮಾನ್ಯವಾಗಿ ಹುಡುಗಿಯನ್ನು 12ರಿಂದ16 ವರ್ಷದೊಳಗೆ ಮದುವೆ ಮಾಡುತ್ತಾರೆ. ಪಾಪ ಈ ಹುಡುಗಿಯರಿಗೆ ಮದುವೆ ಎಂದರೆ ಏನೆಂದೇ ಗೊತ್ತಿರುವುದಿಲ್ಲ ಹಾಗೂ ಹುಡುಗನ ವಯಸ್ಸು 18ರಿಂದ 22 ರೊಳಗೆ ಇರುತ್ತದೆ. ಮದುವೆ ಎನ್ನುವಾಗ ಸಂತೋಷದಿಂದ ಒಪ್ಪಿಕೊಳ್ಳುತ್ತಾರೆ. ಮುಂದೆ ಜೀವನ ಹೇಗೆ ನಡೆಸಬೇಕೆಂದು ಸಹ ಗೊತ್ತಿರುವುದಿಲ್ಲ.

ಮದುವೆ ಆಗಿ ಎರಡೇ ವರ್ಷದಲ್ಲಿ 2 ಮಗು. ಅದು ಹೆಣ್ಣುಮಗುವೇನಾದರೂ ಆದರೆ ಅತ್ತೆ ಮಾವನ ಇಷ್ಟಕ್ಕಾದರೂ ಗಂಡು ಮಗು ಆಗುವವರೆಗೆ ಹಡೆಯುತ್ತಿರಬೇಕು. ಕೊನೆಗೆ ಗಂಡು ಮಗು ಆಗದಿದ್ದರೂ ಸರಿ. ಪಾಪ 15-16ವರ್ಷದ ಆಡುವ ಮಗುವಿಗೆ ಮದುವೆ ಎಂಬ ಶಿಕ್ಷೆ. ಮುಂದೆ ಅವಳ ಜೀವನ ಹಾಗೂ ದೇಹಸ್ಥಿತಿ ಏನಾಗಬಹುದೆಂದು ತಂದೆ-ತಾಯಿಯರು ಯೋಚಿಸುವುದೇ ಇಲ್ಲ. ಇರಲಿ ಮದುವೆಯಾದ ನಂತರ ಈ ಹೆಣ್ಣಿಗೆ ಗಂಡ, ಅತ್ತೆಯಿಂದ ನೆಮ್ಮದಿ ಇದೆಯೆ? ಇಲ್ಲ. ಮದುವೆ ಆಗಿ ಒಂದು ವರ್ಷದೊಳಗೆ (ಗೌರಿ ಹಬ್ಬಕ್ಕೆ ಮೊದಲು) ತಾವು ಹೇಳಿದ ವರದಕ್ಷಿಣೆ(Dowry) ಹಣ, ಬೈಕು ಯಾವುದಾದರೂ ಒಂದು ತರದಿದ್ದರೂ ಹೆಣ್ಣಿನ ಜೀವ ಹೋಗುವ ಸಾಧ್ಯತೆ ಇದೆ. ಇಂತಹ ಹುಡುಗನ ಕಡೆಯವರು ಮದುವೆ ಮಾಡಿಕೊಳ್ಳುವುದು ಹುಡುಗಿಗಾಗಿ ಅಲ್ಲ. ಹುಡುಗಿಯ ಮನೆಯವರು ಕೊಡುವಂತಹ ಬಳುವಳಿಗಾಗಿ. ಹುಡುಗಿಯ ಅಪ್ಪ-ಅಮ್ಮನ ಕಡೆಯವರು ಹಣವಂತರಾಗಿದ್ದು ಕೂಡಲೇ ಬೇಡಿಕೆಗಳನ್ನು ಈಡೇರಿಸಿದರೆ ಹುಡುಗಿಯ ಜೀವ ಉಳಿಯುತ್ತದೆ. ಇಲ್ಲವಾದಲ್ಲಿ ಹುಡುಗಿಗೆ ಚಿತ್ರಹಿಂಸೆ ಕೊಟ್ಟೋ ಅಥವಾ ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿ ಅವಳ ಜೀವಕ್ಕೆ ಮಂಗಳ ಹಾಡುವರು. ಕೆಲವರು ಹೆಣ್ಣು ಮಕ್ಕಳನ್ನು ವರಶಾಪ ಎಂದು ಕೊಳ್ಳುವರು.

ಕೊಡಗಿನ ಗೌಡ ಜನಾಂಗದಲ್ಲಿ ಇಂತಹ ಪ್ರಸಂಗ ಇಲ್ಲವೇ ಇಲ್ಲ. ಇದನ್ನು ಯೋಚಿಸಿದರೆ ಗೌಡ ಜನಾಂಗದವರೆಲ್ಲ ಪುಣ್ಯ ಮಾಡಿರುವವರೆನೋ ಎಂದು ಅನಿಸುವುದಿಲ್ಲವೆ? ಕೆಲವರಿಗೆ ಹೆಣ್ಣು ಮಕ್ಕಳೇ ಆದರೂ ಚಿಂತಿಸುವುದಿಲ್ಲ. ಇವರೇ ನಮ್ಮ ಗಂಡು ಮಕ್ಕಳೆಂದು ಸಂತೋಷಪಡುತ್ತಾರೆ. ವರದಕ್ಷಿಣೆಯಂತೂ ಇಲ್ಲವೇ ಇಲ್ಲ (99%) ಬೈಕು, ಸೈಟ್, ಸೂಟು ಕೇಳುವುದೇ ಇಲ್ಲ. ಮದುವೆ ಆಗುವ ಹುಡುಗನೇ ಹುಡುಗಿಗಾಗಿ ರೇಷ್ಮೆ ಸೀರೆ, ತಾಳಿ, ಓಲೆ, ಉಂಗುರ ಇತ್ಯಾದಿ ತೆಗೆದುಕೊಂಡು ಹೋಗಿ "ಧಾರೆ" ಮಾಡಿ ಕೊಂಡು ಹುಡುಗಿಯನ್ನು ಕರೆತರುವನು. ಕೊಟ್ಟ ಹೆಣ್ಣು ಕುಲದಿಂದ ಹೊರಗೆ ಎನ್ನುವ ಗಾದೆಯಂತೆ ಮಗಳನ್ನು ಮದುವೆ ಮಾಡಿ ಕೊಟ್ಟ ನಂತರ ಅಪ್ಪ ಅಮ್ಮನಿಗೆ ಯಾವುದೇ ಖರ್ಚು ಇರುವುದಿಲ್ಲ ಹಾಗೂ ಕೊಡಗಿನಲ್ಲಿ ಮದುವೆಯ ವಯಸ್ಸು ಸಹ ಬಹಳ ಸೂಕ್ತವಾಗಿದೆ. ಸಾಮಾನ್ಯವಾಗಿ ಹುಡುಗಿಯ ಮದುವೆಯ ವಯಸ್ಸು 20 ರಿಂದ 25 ಹಾಗೂ ಹುಡುಗನ ವಯಸ್ಸು 25 ರಿಂದ 30. ಈ ವಯಸ್ಸಿನಲ್ಲಿ ಮದುವೆ ಮಾಡುವುದರಿಂದ ತಮ್ಮ ಮದುವೆಯ ನಂತರ ಒಳ್ಳೆ ಜೀವನ ನಡೆಸಲು ಸಾಧ್ಯ. ಇದೆಲ್ಲ ಕೇಳಿದರೆ ಕೊಡಗಿನ ಗೌಡ ಜನಾಂಗದವರು ನಿಜವಾಗಿಯೂ ಪುಣ್ಯವಂತರು. ಎನಿಸುವುದಿಲ್ಲವೆ? (ಬೇರೆ ಜಿಲ್ಲೆಗೆ ಹೋಲಿಸಿದರೆ) ಕೆಲವರಿಗೆ ಕೊಡಗಿನಲ್ಲಿ ವರದಕ್ಷಿಣೆ ಪದ್ಧತಿ ಇಲ್ಲವೆಂದರೆ ನಂಬುವುದೇ ಇಲ್ಲ. ಈ ವರದಕ್ಷಿಣೆಯಿಂದಾಗಿ ಎಷ್ಟೋ ಮಂದಿ ತಂದೆ ತಾಯಿಯರು, ಹಾಗೂ ಹೆಣ್ಣು ಮಕ್ಕಳು ಜೀವಂತ ದಹನ ವಾಗುತ್ತಿರುವುದು ಖಂಡಿತಾ.

ಆದುದರಿಂದ ಸರಕಾರವು ಕಡ್ಡಾಯವಾಗಿ 18ರಿಂದ 21ರ ವಯಸ್ಸಿನ ಮೊದಲು ಮದುವೆ ಮಾಡುವ ತಂದೆ ತಾಯಿಯರ ಮೇಲೆ ಕಠಿಣ ಕ್ರಮ ಕೈಗೊಳ್ಳಬೇಕು ಅಲ್ಲದೇ ವರದಕ್ಷಿಣೆ ಹಾಗೂ ಮಿತಿ ಮೀರಿದ ಬೇಡಿಕೆಗಳನ್ನು ಮಾಡುವವರ ಮೇಲೆಯೂ ಕ್ರಮ ಕೈಗೊಂಡು ಮುಂದಿನ ನವ ವಿವಾಹಿತರ ಜೀವನವು ಸುಖಮಯವಾಗಿ ಸಾಗಲಿ ಎಂಬುದೇ ಎಲ್ಲರ ಇಷ್ಟ.

**ಕುಂಟು ಪುಣೆ ರಾಮಕೃಷ್ಣ, ಗೋಣಿಮರೂರು.**

---

## ನಗೆಹನಿ

**ಶ್ಯಾಮು** : ಡಾಕ್ಟ್ರೆ ನನ್ನ ಎದೆ ಬಡಿತ ತುಂಬಾ ಜೋರಾಗಿದೆ.

**ಡಾಕ್ಟರ್** : ಹೆದರಬೇಡ, ಅದನ್ನು ಪೂರ್ಣವಾಗಿ ನಿಲ್ಲಿಸುತ್ತೇನೆ.

**ರಾಮು** : ಡಾಕ್ಟ್ರೆ, ನನ್ನಿಂದ ಕೇವಲ 59 ಸೆಕೆಂಡ್ ಮಾತ್ರ ಜೀವವಿರಲು ಸಾಧ್ಯ.

**ಡಾಕ್ಟರ್** : ಒಂದು ನಿಮಿಷ ನಿಲ್ಲು, ಬರುತ್ತೇನೆ.

**ದಂಬೆಕೋಡಿ ಅಯ್ಯಪ್ಪ, ಮೂರ್ನಾಡು**

---

ತಲೆ ಗಟ್ಟಿ ಇದೆ ಎಂದು ಕಲ್ಲಿಗೆ ಹೊಡೆಯಬಾರದು

# ವಧು ಪರೀಕ್ಷೆ

'ವಧು ಪರೀಕ್ಷೆ ಅನಾಧಿಕಾಲದಿಂದಲೂ ಅಂಟಿಕೊಂಡು ಬಂದಿರುವ ಸಾಂಕ್ರಾಮಿಕ ರೋಗ. ಇದರ ಬಗ್ಗೆ ಅನೇಕ ಬುದ್ದಿ ಜೀವಿಗಳು ಆಗಿಂದ್ದಾಗ್ಗೆ ಜನರಿಗೆ ತಿಳಿಸುತ್ತಾ ಬಂದಿದ್ದಾರೆ. ಆದರೆ ವಧು ಪರೀಕ್ಷೆಯ ಶೋಷಣೆಯನ್ನು ನಿವಾರಿಸಲು ಇದುವರೆಗೆ ಸಾಧ್ಯವಾಗಿರುವುದಿಲ್ಲ. ಮೀಸೆ ಹೊತ್ತ ಗಂಡಿಗೆ(ಮೀಸೆ ಇಲ್ಲದಿದ್ದರು ಗಂಡಸೆ) ತನ್ನದೆ ಮೆಲುಗೈ ಆಗಬೇಕೆಂಬ ಮಹಾದಾಶೆ. ಈ ಮಹಾದಾಶೆಯಲ್ಲಿ ಅವರು ನಡೆಯಿಸುತ್ತಿರುವ ವಧು ಪರೀಕ್ಷೆಯೆ ವಿಚಿತ್ರ. ಕೆಲವರು ದಿಢೀರ್ ಶ್ರೀಮಂತರಾಗುತ್ತಾರೆ ಅಥವ ಅವರ ಮಕ್ಕಳು ಅದೃಷ್ಟವಶಾತ್ ಒಳ್ಳೆ ಹುದ್ದೆಯಲ್ಲಿರುತ್ತಾರೆ. 'ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಥರಾತ್ರಿಯಲ್ಲಿ ಕೊಡೆ ಹಿಡಿದನಂತೆ.' ಅಂಥವರಿಗೆ ಹುಡುಗಿ ಕಡೆಯಿಂದ ಇಡೀ ಬ್ರಹ್ಮಾಂಡವನ್ನೆ ಕಬಳಿಸುವ ಬಯಕೆ. ಈ ಅಲ್ಪ ಬಯಕೆಯಲ್ಲಿ ಎಷ್ಟು ಹೆಣ್ಣಿನ ಜೀವಮಾನ ಹಾಳಾಗುವುದೆಂದು ಅವರಿಗೆ ತಿಳಿಯುವುದಿಲ್ಲ. ಇದನ್ನೆಲ್ಲ ಹೋಗಲಾಡಿಸಲು ಈಗಿನ ಯುವಕರು ಸ್ವಲ್ಪ ಮುಂದೆ ಬಂದಲ್ಲಿ ಒಂದು ಹೆಣ್ಣಿನ ಮತ್ತು ತನ್ನದೆ ಆದ ದಾಂಪತ್ಯ ಜೀವನವನ್ನು ಸುಗಮಗೊಳಿಸಬಹುದು.

ಈ ಕೆಳಗೆ ತಿಳಿಸಿರುವ ಕೆಲವು ಸಲಹೆಗಳನ್ನು ಗಮನಕ್ಕೆ ತೆಗೆದು ಕೊಂಡಲ್ಲಿ ಹುಡುಗ ಮತ್ತು ಅವನ ಪೋಷಕರು ಎಷ್ಟೋ ನಿಂದನೆಗಳಿಂದ ಪಾರಗಬಹುದು.

ಒಂದು ಹುಡುಗಿಯನ್ನು ಪ್ರತ್ಯಕ್ಷವಾಗಿ ನೋಡುವುದಕ್ಕೆ ಮೊದಲು ಅವಳ ವ್ಯಕ್ತಿ ಪರಿಚಯವನ್ನು ಮಾಡಿಕೊಳ್ಳುವುದು ತುಂಬಾ ಅಗತ್ಯ. ಒಂದು ವೇಳೆ ಹುಡುಗಿ ತನ್ನ ಆಶೆ ಆಕಾಂಕ್ಷೆಗಳಿಗೆ ಅನುರೂಪಳಾಗಿದ್ದಲ್ಲಿ ಮಾತ್ರ ಅವಳನ್ನು ಭೇಟಿಯಾಗಬಹುದು. ಪ್ರತ್ಯಕ್ಷವಾಗಿ ಭೇಟಿ ಕೊಡುವಾಗ ತನ್ನ ಜೊತೆಯಲ್ಲಿ ತನ್ನ ತಂದೆಯನ್ನಾಗಲಿ ತಾಯಿಯನ್ನಾಗಲಿ ಅಥವ ಯಾರಾದರು ರಕ್ತ ಸಂಬಂಧಿಕರನ್ನು ಕರೆದು ಕೊಂಡರೆ ಉತ್ತಮ. ಏಕೆಂದರೆ ಉಭಯ ಕಡೆಯವರು ಹಲವಾರು ವಿಷಯಗಳನ್ನು ಚರ್ಚಿಸಬಹುದು. ಒಂದು ವೇಳೆ ಹುಡುಗ ಒಬ್ಬನೆ ಹುಡುಗಿಯನ್ನು ನೋಡಲು ಹೋಗಿ ಒಪ್ಪಿಕೊಂಡು ತನ್ನ ತಂದೆ ಅಥವ ತಾಯಿಯ ಜೊತೆಯಲ್ಲಿ ವಿಷಯ ತಿಳಿಸುತ್ತಾನೆ. ಆದರೆ ತಂದೆ ತಾಯಿಯ ಲೆಕ್ಕಚಾರವೆ ಬೇರೆ ಇರುತ್ತದೆ. ಆಗ ಹುಡುಗನು ಕತ್ತರಿಯಲ್ಲಿ ಸಿಕ್ಕಿಕೊಂಡ ಅಡಿಕೆಯಂತಾಗುತ್ತಾನೆ.

ಕೆಲವು ಜನರು ಹಿಂದು ಮುಂದು ನೋಡದೆ ಹುಡುಗಿಯ ಮನೆಗೆ ದಿಢೀರ್ ಬಂದು, ಉಂಡು ತಿಂದು ಯಾವ ಒಂದು ನಿರ್ಧಾರಕ್ಕೆ ಬಾರದೆ ಆಮೇಲೆ ಹೇಳಿ ಕಳಿಸುತ್ತೇವೆ ಎಂದು ಹೋಗುವವರು ಮತ್ತೆ ಸುಳಿವೆ ಇರುವುದಿಲ್ಲ. ಇಂಥವರಿಗೆ ಏನು ಹೇಳಬೇಕೆಂದು ನೀವೆ ತೀರ್ಮಾನಿಸಿ.

ಒಂದು ಹುಡುಗಿಯನ್ನು ನೋಡುವುದಕ್ಕೆ ಮೊದಲು ಹುಡುಗ, ಹುಡುಗಿಯರ ಗಣ ಕೂಡ ಸರಿಬರುತ್ತದೆಯೊ ಎಂದು ನೋಡಿಕೊಳ್ಳಬೇಕು (ಇದು ಅದರ ಮೇಲೆ ನಂಬಿಕೆ ಇಡುವವರಿಗೆ ಮಾತ್ರ ಅನ್ವಯಿಸುವುದು) ಒಂದು ವೇಳೆ ಸರಿಯಾಗಿ ಕೂಡಿ ಬಂದಲ್ಲಿ ಮುಂದೆ ಮಾತುಕತೆ ನಡೆಸಬಹುದು.

ಈಗ ನಾವು21 ನೇ ಶತಮಾನಕ್ಕೆ ಕಾಲು ಇಡುತ್ತಿದ್ದೇವೆ. ನಮ್ಮ ಪೂರ್ವಜರ ಕಾಲದಲ್ಲಿ ಅದೆಷ್ಟೋ ನೀತಿ ನಿಯಮಗಳಿದ್ದವು. ಹುಡುಗ ಹುಡುಗಿಯನ್ನು ನೋಡದಯೆ ಲಗ್ನ ನಿಶ್ಚಯವಾಗುತ್ತಿತ್ತು. ಆದರೆ ಈಗ ಕಾಲ ಬದಲಾಗಿದೆ. ಹುಡುಗ ಹುಡುಗಿ ಒಬ್ಬರನ್ನೊಬ್ಬರು ಅರಿತುಕೊಂಡು ಮದುವೆ ಆಗುವ ಕಾಲ ಬಂದಿದೆ. ಈಗಿನ ಯುವಕ ಯುವತಿಯರು ಮುಂದಿನ ಪೀಳಿಗೆಗೆ ನಾಂದಿ ಆಗಬೇಕು. ತುಚ್ಛ ಭಾವನೆಗಳನ್ನು ಬಿಟ್ಟು, ತನ್ನ ಬಾಳಸಂಗಾತಿ ಆಗುವ ಹುಡುಗಿಯನ್ನು ಅರಿತು ಕೊಳ್ಳಬೇಕು. ಬೀದಿ ಬಸವನ ಹಾಗೆ ತಂದೆ ತಾಯಿಯು ಬೇಕು ಎನ್ನುವಾಗ ಬೇಕು ಬೇಡ ಎನ್ನುವಾಗ ಬೇಡ ಎಂದು ತಲೆ ಅಲ್ಲಾಡಿಸಬಾರದು. ಹಾಗಿದ್ದಲ್ಲಿ ಮಾತ್ರ ಜೀವನ ಸಾರ್ಥಕವಾಗುತ್ತದೆ.

**ಪೂಜಾರೀರ ಗೋಪಾಲ, ಬೆಂಗಳೂರು.**

---

## ಖಾಲಿ ಕುಪ್ಪಿ !!!

ತಿಳಿಯಕಾಗದ್‌ನೇ......ಗೂಡೆ  
ಈ ಬದ್ಕೂ....ಬಾಳ ಹಗ್‌ರ  
ನೀ ಹಂಗೆ ತಿಳ್ಕಂಡ್ರೇ.....  
ಬದ್ಕಾದೆ ಭಿದ್ರು.....ಭಿದ್ರು.  
ಮನ್ಸುನ ಹರ್ದತ್ತ ಬುಟ್ರೆ......  
ನೀ......ಹೆಂಗೆಂಗೋ ಆಡಿರೇ......  
ನಿಂಗೇನೋ ಖುಷಿ ಸಿಕ್ಕುದೂ.......  
ಆದ್ರೆ.....ಹೋದ ಮಾನ ತಿರ್ಗಿ ಬಂದದೆನೆ ?  
ಜನ್ರಾಡ್‌ವೆ ನೂರೆಂಟು ಮಾತ್.....  
ನೀ ಹೇಳಿಯಾ ಅವುಕೆ 'ಸಣ್ಣ ಜನ'  
ಆದ್ರೇ ನಿನ್ನ ಮನ್ಸುನ ನೀನೇ ಕೇಳ್ಕಾ.....  
ಅದು ಹೇಳ್ಲೆಯಾ.....ನೀ ಕಳ್ಳೆ, ತಾ.....???  
ದೊಡ್ಡ-ದೊಡ್ಡ ಮಾತ್‌ಗಾ ಆಡ್ರೆ......  
ಸಾಲ್ದಪ್ಪಾ......ಹಂಗೆನೇ ನಡೆಯೊಕೂ....  
ನೀನಾಡ್ದಂಗೆ ಇನ್ನೊಬ್ಬ ಆಡಿರೇ.....  
ನಿನ್ನ ಹುಬ್ಬೇಕೆ.....ಮೇಲ್ಹೋದು ?  
ದೊಡ್ಡ ಮಾತ್‌ಗೆಲ್ಲಾ...... ಆಡಿಕೆ ಮಾತ್ರಾನಾ ?  
ಹಂಗೆನೇ...... ನೀ ಯಾಕೆ ನಡೆಯೊದ್ಲೆ.... ?  
ಓ...... ನನ್ನಕ್ಕ...... ಯೌವ್ವನ ಇರ್‍ಕಾಕನ್,  
ಎಲ್ಲವೂ ಇರ್‍ದೂ ನಿನ್ನ್ ಕಾಲತ್ತ.....  
ಯೌವನ ಹೋಕಾಕನಾ.....  
ಯಾರಿದ್ದವೆನೇ.... ನಿನ್ನತ್ರಾ....?  
ನಿನ್ಗತಿ ಏನಾದೆ...... ಗೊತ್ತಾ....?  
ಅವ್ ಕುಡ್ದು ಎಸ್ದ....ಖಾಲಿ ಕುಪ್ಪಿ!!!

**ಮೂಡಗದ್ದೆ ಕೃಪಾ ಈರಪ್ಪ, ತಿತಿಮತಿ**

---

**ಗಂಡನಿಗೆ ಹೆದರದವಳು ಗುಂಡಿಗೆ ಹೆದರುವಳೊ?**

# "ತೊರೆಯಲ್ಲಿ ಮೊಲದ ಬೇಟೆ"

– ಬಾರಿಯಂಡ ಜೋಯಪ್ಪ

ಕೊಡಗಿನ ಬಾಳೆಲೆಯ ಕೆಲವು ಹಳ್ಳಿಗಳು ಮಳೆಗಾಲದಲ್ಲಿ ಮುಳುಗಡೆಯಾಗುವುದುಂಟು. ಚಹದಂಥ ಬಣ್ಣದ ನೀರು ತುಂಬಿ ಹರಿಯುವ ಲಕ್ಷ್ಮಣತೀರ್ಥದ ಸೆಡವನ್ನು ಆಗ ನೋಡಬೇಕು !

ಚೋಮುಣಿ ಅದೇ ಊರಿನ ಈಜು ಬಾರದ ಯುವಕ. ಮೊದಲ ಮಳೆಗೆ ನದಿ ಉಕ್ಕಿ ಹರಿದರೆ ಅವನಿಗೆ ಪರಮಾನಂದ. ಅದಕ್ಕಾಗಿ ಕಾತರಿಸಿದ್ದ ಆತ ಹಲವಾರು ಬಾರಿ ದೋಣಿ ನಡೆಸಿದ್ದ. ಒಂದು ರಾತ್ರಿ ಭಯಂಕರ ಮಳೆ ಸುರಿಯಿತು. ಲಕ್ಷ್ಮಣತೀರ್ಥ ಕ್ಷಣವಾಗಿ ತನ್ನ ಗಂಭೀರತೆಯನ್ನು ಹೊರಸೂಸುತ್ತಿತ್ತು. ಮೊಲದ ಬೇಟೆಗೆ ಹೋಗುವ ಆಸೆ ಚಿಗುರೊಡೆಯಿತು.

ನದಿಯಲ್ಲಿ ಮೊಲದ ಬೇಟೆ?!

ಹೌದು, ನದಿಯಲ್ಲಿ ಮೊಲದ ಬೇಟೆಯಾಡುವವರಿಗೇನೂ ಕೊರತೆಯಿಲ್ಲ. ಮೊದಲ ಮಳೆ ಸುರಿದು ನದಿ ಉಕ್ಕಿ ಹರಿದರೆ ಸಣ್ಣ ಪುಟ್ಟ ಮೈದಾನಗಳು, ಹಳ್ಳ ಕೊಳ್ಳಗಳಲ್ಲೆಲ್ಲ ನೀರು ತುಂಬಿ ಕೊಳ್ಳುತ್ತದೆ. ಆಗ ಅಲ್ಲಿಯ ಪೊದೆಗಳಲ್ಲಿದ್ದ ಮೊಲಗಳು ಎತ್ತ ಓಡಬೇಕು? ಎಲ್ಲಿ ದಿಬ್ಬವಿರುವುದೋ ಅಲ್ಲಿಗೆ ಧಾವಿಸಿ ಗುಂಪಾಗಿ ಕುಳಿತು ಬದುಕುವ ಕನಸನ್ನು ಕಾಣಬೇಕು. ಸುತ್ತೆಲ್ಲಾ ನೀರು. ಅಂಥ ದಿಬ್ಬದ ಕಡೆಗೆ ಬೇಟೆಗಾರ ಬಂದರೆ ಮೊಲಗಳು ಓಡಲು ನೋಡುತ್ತವೆ. ಆದರೇನು? ಸುತ್ತಲೂ ನೀರಿರುವಾಗ ಎತ್ತ ಓಡಿಯಾವು? ಏನು ಮಾಡಿಯಾವು? ಅನಾಯಾಸವಾಗಿ ಬೇಟೆಗಾರ ಚೀಲವನ್ನು ತುಂಬಿಕೊಳ್ಳುವನು.

ಅಂದು ಬೆಳಿಗ್ಗೆ :

ಮೊದಲ ಮಳೆಗೆ ಮೊಲಗಳು ದಿಬ್ಬದಲ್ಲಿರುವ ವಿಚಾರ ಚೋಮುಣಿಗೆ ಗೊತ್ತಿತ್ತು. ಚೀಲ ಮತ್ತು ದೊಣ್ಣೆಯೊಡನೆ ದೋಣಿಯ ಬಳಿ ಚೋಮುಣಿ ಹೊರಟ. ನೀರು ರಂಗುರಂಗಾಗಿ ಮೇಲೇರಿ ಬರುತ್ತಿತ್ತು. ಒಂದೆರಡಲ್ಲ ಹಲವಾರು ಮೊಲಗಳನ್ನು ಬಲಿ ತೆಗೆಯಬೇಕೆಂದು ಯೋಚಿಸುತ್ತಲೇ ಚೋಮುಣಿ ದೋಣಿಯ ಹಗ್ಗವನ್ನು ಬಿಚ್ಚಿದ. ದೋಣಿಯೊಳಗೆ ಕುಳಿತ. ಹುಟ್ಟು ಹಾಕಿದ.

ಮಳೆ ತನ್ನ ಆರ್ಭಟವನ್ನು ನಿಲ್ಲಿಸಿ ಮೌನವಾಗಿತ್ತು.

ದೂರದಲ್ಲೊಂದು ಬಿದಿರುಮೆಳೆ. ಅದು ದಿಬ್ಬದ ಮೇಲಿತ್ತು. ಅಲ್ಲಿ ಖಂಡಿತವಾಗಿ ಮೊಲಗಳಿರಬಹುದೆಂದು ಯೋಚಿಸಿದ. ಹೊಳೆಯ ನಡುಭಾಗದಲ್ಲಿ ದೋಣಿ ಸಾಗಿತು. ಮರವೊಂದು ತೇಲಿ ಹೋಗುತ್ತಿತ್ತು. ದೋಣಿ ಸಾಗಿ ದಿಬ್ಬವನ್ನು ತಲುಪಿತು. ಮೆಲ್ಲನೆ ದೋಣಿಯನ್ನು ನಿಲ್ಲಿಸಿ ಇಳಿದು ಎಳೆದು ಕಟ್ಟಿದ. ದೂರದಲ್ಲಿ ಕೆಲವು ದಿಬ್ಬಗಳಿರುವುದನ್ನು ಕಂಡು ಖುಷಿಪಟ್ಟ. ಈ ದಿಬ್ಬದಲ್ಲಿ ಎಷ್ಟೆಷ್ಟು ಮೊಲಗಳಿರಬಹುದು? ಮನದಲ್ಲೇ ಎಣಿಸಿಕೊಳ್ಳುತ್ತ ಚೀಲ ಮತ್ತು ದೊಣ್ಣೆಯನ್ನು ತೆಗೆದುಕೊಂಡು ಪೊದೆಯತ್ತ ನಡೆದ. ಎತ್ತೆತ್ತಲೂ ನೀರು. ಪೊದೆಯಲ್ಲಿ ಅಡಗಿ, ಹೆದರಿ ಕುಳಿತ ಮೂರು ಮೊಲಗಳು ಚೋಮುಣಿಯನ್ನು ನೋಡಿ ಹೆದರಿದವು. ಅತ್ತಿತ್ತ ಓಡಿ ತಪ್ಪಿಸಿಕೊಳ್ಳಲು ನೋಡಿದವು. ಆದರೆ ತಪ್ಪಿಸಿಕೊಳ್ಳುವುದೆಂದರೆ ನೀರಿಗೆ ಬೀಳಬೇಕಷ್ಟೆ. ನೀರಿನಿಂದ ಬದುಕುಳಿಯಲು ದಿಬ್ಬದ ಮೇಲೆ ಕುಳಿತ ಮೇಲೆ ಮತ್ತೆ ಸಾಯಲು ನೀರಿಗೇಕೆ ಹಾರಬೇಕು? ಅತ್ತಿತ್ತ ಓಡಾಡಿದಂತೆ ನೀರು ಸ್ವಲ್ಪ ಏರಿಕೆಯಾಯಿತು. ಬಿದಿರ ಮೆಳೆಯೊಳಗೆ ನುಗ್ಗುವಂತಿಲ್ಲ. ಮತ್ತೆ ಪೊದೆಯತ್ತ ನುಗ್ಗಿದವು. ಆದರೆ ಆ ಪೊದೆಯೊಳಗೆ ನೀರು ಈಗ ತಳಗೊಡುತ್ತಿತ್ತು. ಇತ್ತ ಬೇರಿನ ಸಂದಿಯತ್ತ ಹಾರಿದವು. ಅಲ್ಲೂ ನೀರು! ಅಷ್ಟರಲ್ಲಿ ಬೇಟೆಗಾರ ಚೋಮುಣಿ ದೊಣ್ಣೆಯಿಂದ ಒಂದಕ್ಕೆ ಹೊಡೆದ. ಅದು ಬಿದ್ದುಹೋಯಿತು. ಎತ್ತಿ ಅದಕ್ಕೂ ಹೊಡೆದ. ಅದೂ ಸಿಕ್ಕಿತು. ಮತ್ತೊಂದನ್ನು ಬಿಡುವುದು ಉಂಟೆ? ಅದು ಬಿದರ ಮೆಳೆಯೊಳಗೆ ನುಗ್ಗಲು ಹವಣಿಸುತ್ತಿತ್ತು. ಆದರೆ ಅಂತ ಮುಳ್ಳಿನೊಳಗೆ ನುಗ್ಗುವುದಕ್ಕಿಂತ ಸುಮ್ಮನಿರುವುದೇ ಲೇಸೆಂದು ಅದು ಬೆನ್ನು ಹಾಕಿ ಅಲ್ಲೇ ಕುಳಿತಿತು. ಹೊಡೆತ ಅದರ ಮೇಲೂ ಬಿದ್ದಿತ್ತು. ಸುತ್ತುರುಳಿತು. ಮೂರು ಮೊಲಗಳನ್ನು ಚೀಲಕ್ಕೆ ತುಂಬಿದ. ದೋಣಿಯ ಪಯಣ ಮುಂದೆ ಸಾಗಿತು. ಈಗ ಮತ್ತೊಂದು ದಿಬ್ಬದತ್ತ. ದೋಣಿ ನಿಲ್ಲಿಸಿ ಕಟ್ಟಿಹಾಕಿ ಆ ದಿಬ್ಬದ ಪೊದೆಯೊಳಗೆ ಹುಡುಕಿದ. ಅರೆ! ಒಂದೇ ಒಂದು ಮೊಲ. ಉದ್ದ ಕಿವಿಯ ಕತ್ತೆ ಮೊಲವೆಂದುಕೊಂಡ. ಮೊಲಕ್ಕೂ ಚೋಮುಣಿಗೂ ಹೆಚ್ಚು ಕಡಿಮೆ ಕಬಡ್ಡಿ ಆಟವೇ ನಡೆದಿತ್ತು. ಕೊನೆಗೆ ಪೆಟ್ಟು ತಿಂದ ಮೊಲ ಉರಳಾಡಿತು. ಹಿಡಿದುಕೊಳ್ಳಲು ಹೋದಾಗ ಮೊಲ ತೇಲಿಹೋಯಿತು. ಸಿಗಲಾರದ ಮೊಲಕ್ಕಾಗಿ ಮರುಗಿದ. ಹೋದರೆ ಹೋಗಲಿ; ಇನ್ನೊಂದು ದಿಬ್ಬವನ್ನು ನೋಡಿದರಾಯಿತೆಂದು ಸಮಾಧಾನ ಪಟ್ಟುಕೊಂಡು ದೋಣಿ ಏರಿ ಕುಳಿತ.

ದೋಣಿ ನೀರು ಹರಿವ ದಿಕ್ಕಿನತ್ತಲೇ ಸಾಗುತ್ತಿತ್ತು. ಬಹು ಜಾಗೃತಿಯಿಂದ ದೋಣಿಯನ್ನು ನಡೆಸುತ್ತಿದ್ದ. ಬಿದಿರ ಮೆಳೆಯ ಮತ್ತೊಂದು ದಿಬ್ಬದ ಬಳಿ ದೋಣಿ ನಿಂತಿತು. ಇಳಿದು ಆ ದಿಬ್ಬವನ್ನು ಶೋಧಿಸಿದ. ಹಾವೊಂದು ಗಿಡಕ್ಕೆ ಸುತ್ತಿಕೊಂಡಿತ್ತು. ಅದಕ್ಕೆ ಒಂದೇಟು ಕೊಟ್ಟು ನೀರಿಗೆ ಎಸೆದ. ಪೊದೆಯೊಳಗೆ ಇಣುಕಿದ. ಎರಡು ಮೊಲಗಳು ಎವೆಯಿಕ್ಕದೆ ಕಿವಿ ಅಲುಗಿಸದೆ ಇವನನ್ನೇ ನೋಡುತ್ತಿದ್ದವು. ಹಾರಿ ಓಡಲೇ ಇಲ್ಲ. ಎರಡಕ್ಕೂ ಸೇರಿಸಿ ಹೊಡೆದ. ಒಂದು ಮೊಲ ಅಲ್ಲೇ ಚಡಪಡಿಸಿ ಸತ್ತಿತ್ತು. ಇನ್ನೊಂದು ಅರೆಪೆಟ್ಟಾಗಿ ಅತ್ತಿತ್ತ ಓಡಿತು. ಇದೂ ಏನಾದರೂ ನೀರಿಗೆ ಹಾರಿದರೆ ನಷ್ಟವಾದೀತೆಂದು ಛಂಗನೆ ಅದರತ್ತ ಜಿಗಿದ. ಮುಳ್ಳುಗಿಡಗಳು ಯಾವ ಲೆಕ್ಕ? ಹಾರಿದ ಛೋಮುಣಿಗೆ ಮೊಲ ಸಿಕ್ಕೇ ಸಿಕ್ಕಿತು. ಕಾಲನ್ನು ಹಿಡಿದು ನೆಲಕ್ಕೆ ಬಡಿದ. ಮೂಗಿನಿಂದ ರಕ್ತ ಸುರಿಯಿತು. ಸತ್ತಿತ್ತು. ಐದು ಮೊಲಗಳ ಒಡೆಯನಾದ ಚೋಮುಣಿ ಗೆಲುವಿನ ನಸು ನಗುತ್ತಾ ದೋಣಿಯನ್ನೇರಿದ.

ಚೋಮುಣಿ ನದಿಯಲ್ಲಿ ಸಾಗುತ್ತಾ ದೂರದ ದಡವನ್ನು ನೋಡಿದ ಓ! ಎಷ್ಟೊಂದು ದೂರ! ಚೋಮುಣಿ ಬೇಗನೆ ದಡವನ್ನು ಮುಟ್ಟುವ ಕನಸು ಕಂಡ. ಹುಟ್ಟು ಹಾಕುತ್ತಾ ಹಾಕುತ್ತಾ ಸಾಗಿದ. ಹೀಗಿರಲು ಚೋಮುಣಿಗೆ ಆಯಾಸವಾಯಿತು. ದೋಣಿಯ ದಿಕ್ಕು ತಪ್ಪಿತು. ನದಿ ಹರಿಯುವ ದಿಕ್ಕಿನತ್ತಲೇ

20ನೇ ಪುಟಕ್ಕೆ

# ಅರೆಭಾಷೆಯ ಅರೆಗುಣಗಳು.

ನಮ್ಮ ಮಾತೃ ಭಾಷೆ ಅರೆಭಾಷೆ. ಅರೆಭಾಷೆ ಎಂದ ಮಾತ್ರಕ್ಕೆ ಭಾಷೆ ಅರ್ಧವಾಗಿರುತ್ತದೆ ಎಂದು ಅರ್ಥವಲ್ಲ. ಈ ಭಾಷೆಯ ಗುಣಗಳು ಅರ್ಧವಾಗಿಲ್ಲ. ಅರೆ ಭಾಷೆಯು ಒಂದು ಸ್ವತಂತ್ರವಾದ ನಡು ಗನ್ನಡದ ಪಳಯುಳಿಕೆ ಭಾಷೆಯಾಗಿರುತ್ತದೆ. ನಾವು ಅಂದರೆ ಜನರು ಈ ಭಾಷೆಯನ್ನು ಕೆಲವು ಸಲ ಅರೆಗುಣಕ್ಕೆ ತರುವುದು ಶೋಚನೀಯ. ಈ ಭಾಷೆಯನ್ನು ಒಬ್ಬ ವಿದ್ವಾನ್ ರಚಿಸಿದನಾ? ಅಥವಾ ನಮ್ಮ ಪೂರ್ವಜರಿಂದ ಜನಪದೀಯವಾಗೀ ಬೆಳೆದು ಬಂತಾ ಎಂದು ತಿಳಿಯುವುದು ಮುಖ್ಯ. ಆದರೆ ಇದು ಸತ್ಯ. ಮಾತಾಡುವ ಭಾಷೆ ಸಂಕ್ಷಿಪ್ತವಾಗಿರಬೇಕು ಎನ್ನುವುದು ಎಲ್ಲರೂ ಒಪ್ಪುವಂತಹ ವಿಚಾರ. ಈ ಕಾರಣದಿಂದಲೇ ಕನ್ನಡ ಭಾಷೆಯನ್ನು ಸಂಕ್ಷಿಪ್ತ ರೂಪಕ್ಕಿಳಿಸಿರುವುದೆ ನಮ್ಮ ಅರೆಭಾಷೆ ಎನ್ನುವುದು ನನ್ನ ಅಭಿಪ್ರಾಯ. ಉದಾ : ಕನ್ನಡದ ಹೋಗ ಬೇಕು ಹೋಕು (ಹೋಗಕು), ಕನ್ನಡದ ಮಾಡಲಿಕ್ಕಾಗುವುದಿಲ್ಲ, ಮಾಡಕಾದುಲೆ ಎಂದು ಅರೆಭಾಷೆ ರಚನೆಯಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಸಂಕ್ಷಿಪ್ತ ಭಾಷೆ ಪ್ರತಿ ಕ್ಷೇತ್ರದಲ್ಲೂ ಪ್ರಯೋಜನಕಾರಿ ಹಾಗೂ ಪ್ರೀತಿ ಪಾತ್ರವಾದುದು. ಇಂಗ್ಲೀಷ್ ವಾಕ್ಯ ಸಂಕ್ಷಿಪ್ತತೆಯಾಗಿದ್ದು ಅರ್ಥವು ವಿಸ್ತಾರವಾಗಿರುವದೇ ಅದರ ಜನ ಪ್ರಿಯತೆಗೆ ಕಾರಣ. ಹಾಗೂ ವಿಶ್ವ ಭಾಷಾ ಮಾನ್ಯತೆ ಪಡೆದಿದೆ. ನಮ್ಮ ಅರೆಭಾಷೆ ಕೂಡ ಸಂಕ್ಷಿಪ್ತರೂಪವಾಗಿರುವುದರಿಂದ ಪ್ರತಿ ಕ್ಷೇತ್ರದಲ್ಲೂ ಮೇಲುಗೈ ಸಾಧಿಸ ಬಹುದು. ಕರ್ನಾಟಕದ ಕನ್ನಡದಲ್ಲಿ ಬೆಂಗಳೂರಿನ ತಂಬಿ ಕನ್ನಡ, ಧಾರವಾಡದ ಕಠಿಣ ಕನ್ನಡ, ಮತ್ತು ಮೈಸೂರಿನ ಮಿಶ್ರ ಕನ್ನಡಕ್ಕೆ ಹೋಲಿಸಿದರೆ, ದಕ್ಷಿಣ ಕನ್ನಡ ಜಿಲ್ಲೆಯ ಕನ್ನಡ ಉತ್ತಮವಾಗಿದ್ದು ಹೊಸಗನ್ನಡದ ಮೂಲ ರೂಪದಲ್ಲಿದೆ. ಇದಕ್ಕೆ ಕಾರಣವಾದ ಹಲವು ಕಾರಣಗಳಲ್ಲಿ ಮನೋರಂಜನಾ ಮಾಧ್ಯಮ ಬಹಳ ಮುಖ್ಯವಾದುದು. ಬೆಂಗಳೂರು-ಮೈಸೂರುಗಳಲ್ಲಿ ಕನ್ನಡ ಚಲನ ಚಿತ್ರ, ಸಂಗೀತಗಳ ಬದಲಾಗಿ ಹಿಂದಿ, ತಮಿಳು, ತೆಲುಗು ಚಲನಚಿತ್ರ ಮತ್ತು ಸಂಗೀತ ಗೀತೆಗಳು ಬೆಳೆಯುತ್ತಿರುವುದು ಎಲ್ಲರಿಗೆ ತಿಳಿದಿದ್ದರೂ ಸಹ ಕನ್ನದ ಗೀತೆಗಳಿಗೆ ನಮ್ಮ ಕನ್ನಡದ ಸಂಗೀತಗಾರರು ಸಂಗೀತ ನೀಡಲು ಬಹಳ ಕಷ್ಟಪಡುತ್ತಾರೆ. ಕಾರಣ ಭಾಷೆಯ ವಿಸ್ತಾರ. ಅರ್ಥದ ಸಂಕ್ಷಿಪ್ತತೆ, ಆದರೆ ಹಿಂದಿ ತಮಿಳು. ಗೀತೆಗಳಿಗೆ ಸುಲಭವಾಗಿ ಮಧುರ ಸಂಗೀತ ನೀಡ ಬಹುದು. ಇದೇ ರೀತಿ ನಮ್ಮ ಅರೆಭಾಷೆಗೆ ಸಂಗೀತ ನೀಡುವುದು ಬಹಳ ಸುಲಭವಾಗಬಹುದು. ಪಂಜಾಬಿನ "ಬಾಂಗಡಾ" ಜಾನಪದ ಹಾಡುಗಳು ಈಗ ಪಾಪ್‌ನ ಮೂಲಕ ಹೊಸ ರೂಪ ತಾಳಿದರೂ ತನ್ನ ಹಳೇ ಶೈಲಿಯನ್ನು ಉಳಿಸಿಕೊಂಡಿದೆ. ಅದೇ ರೀತಿ ಅರೆಭಾಷೆಯಲ್ಲಿ ಗೀತೆಗಳು ರಚಿತಗೊಂಡು ಉತ್ತಮ ನವೀನ ಸಂಗೀತದಲ್ಲಿ ಹೊರಹೊಮ್ಮುತ್ತಿದ್ದರೆ ಅರೆಭಾಷೆಯ ಪೂರ್ಣ ಗುಣ ಜನರಿಗೆ ತಿಳಿಯಲು, ಭಾಷೆ ಬೆಳೆಯಲು ಅನುಕೂಲವಾಗುವುದು.

ಕೊಡಗಿನಲ್ಲಿ ಅರೆಭಾಷೆ ಪ್ರತಿ K. M. ಅಂತರದ ಸ್ಥಳಗಳಲ್ಲಿ ಚಿಕ್ಕ ಪುಟ್ಟ ವ್ಯತ್ಯಾಸಗಳಿಂದ ಬಳಸಲಾಗುತ್ತಿದೆ. ಮಡಿಕೇರಿಯಿಂದ ಹಾಕತ್ತೂರುಗೆ ಬಂದರೆ ಕೆಲವು ವ್ಯತ್ಯಾಸ, ಹಾಕತ್ತೂರು-ವಿರಾಜಪೇಟೆ-ಸೋಮವಾರಪೇಟೆ ಚಿಕ್ಕಪುಟ್ಟ ವ್ಯತ್ಯಾಸಗಳಿವೆ. ಸಿದ್ದಾಪುರಕ್ಕೆ ಹೋದರೆ ಅರೆಭಾಷೆಯ ಅವಸ್ಥೆ ಬೆಂಗಳೂರು ಕನ್ನಡದಂತಾಗಿದೆ. ಈ ಕಡೆ ಮದೆನಾಡು, ಬೆಟ್ಟತ್ತೂರು, ಚೇರಂಬಾಣೆ, ಭಾಗಮಂಡಲ ಹಾಗೂ ಗಾಳಿಬೀಡು ಅರೆಭಾಷೆ. ಎಲ್ಲವನ್ನು ಒಂದಕ್ಕೊಂದು ಹೋಲಿಸಿದರೆ ಚಿಕ್ಕಪುಟ್ಟ ವ್ಯತ್ಯಾಸಗಳನ್ನು ಕಾಣಬಹುದು. ಉದಾ : ಭಾಗಮಂಡಲದಲ್ಲಿ ಕೆಲವರು ಮತ್ತು ಕೊಡಗಿನಾದ್ಯಂತ ಅಜ್ಜ ಅಜ್ಜಿಯಂದಿರು ಹೇಂಗೆ ಎಂದು ಬಳಸಿದರೆ ಮಡಿಕೇರಿ ಸುತ್ತಮುತ್ತಲಲ್ಲಿ ಹೆಂಗೆ ಎಂದು ಬಳಸುತ್ತಾರೆ. "ಹೇಂಗೆ" ಎನ್ನುವರನ್ನು "ಹೆಂಗೆ" ಎನ್ನುವವರು ಹಂಗಿಸುವುದು ಅಥವಾ "ಹೆಂಗೆ" ಎನ್ನುವರನ್ನು "ಹೇಂಗೆ" ಎನ್ನುವವರು ಹಂಗಿಸುವುದು ದೊಡ್ಡ ಅರೆಗುಣ ಹಾಗೂ ತಪ್ಪು. ಎರಡೂ ಅರೆಭಾಷೆಯೇ. ಈ ಎರಡು ಶಬ್ಧಗಳಲ್ಲಿ ಯಾವ ಶಬ್ಧ ಬಹುಮತದಲ್ಲಿರುವುದೊ ಅದನ್ನು ಅರ್ಥ ಮಾಡಿಕೊಂಡು ಉಪಯೋಗಿಸಿದರೆ ಅದು ಅರೆಭಾಷೆ ಬೆಳೆಯಲು ಹಾಗೂ ಜನಪ್ರಿಯಗೊಳ್ಳಲು ಬುದ್ಧಿವಂತಿಕೆಯಾಗುತ್ತದೆ. ಈ ರೀತಿ ಹಲವು ಉದಾಹರಣೆಗಳನ್ನು ಕಾಣುತ್ತೇವೆ.

ಅರೆಭಾಷೆ ಜನಾಂಗದಲ್ಲಿ ಹೆಚ್ಚಿನ ಜನರು ಕೊಡವ ಭಾಷೆ ಕಲಿತಿದ್ದಾರೆ. ಮತ್ತು ತಮ್ಮ ಭಾಷೆ ಬಿಟ್ಟು ಕೊಡವರೊಡನೆ ಕೊಡವ ಭಾಷೆ ಮಾತಾಡುತ್ತಾರೆ. ಆದರೆ ಕೊಡವರು ಕನಿಷ್ಠ ಎಂದರೆ ಕೊಡವ ಭಾಷೆ ಕಲಿತ ಗೌಡ ಜನಾಂಗದ 4ರಲ್ಲಿ ಒಂದು ಭಾಗ ಕೊಡವರು ಅರೆಭಾಷೆ ತಿಳಿದಿರುವುದು ಒಂದು ವಿಶೇಷತೆ. ಇದಕ್ಕೆ ನಾವೇ ಕಾರಣ. ನನ್ನ ಮನೆ ಹತ್ತಿರ ಇರುವ ಕೊಡವ ಮನೆ ಯಜಮಾನಿ ಕನ್ನಡ ಗೊತ್ತಿದ್ದರೂ ನನ್ನ ಅಮ್ಮನೊಡನೆ ಕನ್ನಡ ಮಾತಾಡದೆ ಕೊಡವ ಭಾಷೆ ಮಾತಾಡುತ್ತಿದ್ದರೆ ನನ್ನ ಅಮ್ಮ ಕೂಡ ಕನ್ನಡ ಭಾಷೆ ಮಾತಾಡದೆ ಅರೆಭಾಷೆ ಮಾತಾಡುತ್ತಾರೆ. ಪರಸ್ಪರ ಇಬ್ಬರೂ ಮಾತಾಡುತ್ತಿರುವಾಗ ಅವರ ಸಂಭಾಷಣೆ ಕೇಳಲು ಬಹಳ ಖುಷಿಯಾಗುತ್ತದೆ. ಭಾಷೆ ಕಲಿಯಬಾರದು ಎಂದಲ್ಲ. ಭಾಷೆ ಕಲಿಯಬೇಕು. ಆದರೆ ಮಾತೃ ಭಾಷೆಯಲ್ಲಿ ಪ್ರೀತಿ, ವಾತ್ಸಲ್ಯ, ಹೆಮ್ಮೆ, ಗೌರವ ಇರಬೇಕು. ಗರ್ವ ಇರಬಾರದು. ಇದರಿಂದ ವಿವಿಧ ಪಂಗಡಗಳ ನಡುವೆ ಯಾವುದೇ ವೈವಿಧ್ಯತೆ ಇದ್ದರೂ ಸೌಹಾರ್ದತೆ ಬೆಳೆಯುತ್ತಿರುತ್ತದೆ. ನಮ್ಮ ಮನೆ ನಂದಾದೀಪಕ್ಕೆ ಅವರು ಕೈ ಮುಗಿದರೆ ನಾವು ಅವರ ಮನೆ ದೀಪಕ್ಕೆ ಕೈಮುಗಿಯುವುದರಲ್ಲಿ ತಪ್ಪೇನಿಲ್ಲ. ನಾವು ಇನ್ನೊಂದು ಭಾಷೆ ಕಲಿತರೆ ನಮ್ಮ ಭಾಷೆ ಮತ್ತೊಬ್ಬನು ಕಲಿಯುವುದು ಬಹಳ ಅವಶ್ಯ. ಇತರರು ನಮ್ಮ ಭಾಷೆ ಕಲಿಯುವ ಸ್ಥಿತಿಯಲ್ಲಿ ಅಥವಾ ಕಲಿತ ಮೇಲೂ ತಪ್ಪುಗಳಾದರೆ ಅದಕ್ಕೆ ಸೂನೆ ಹೇಳುವುದು ಸರಿಯಲ್ಲ. ಗಂಭೀರತೆಯಲ್ಲಿ ಅದನ್ನು ಸರಿ ಪಡಿಸುವುದು ನಮ್ಮ ಧರ್ಮ. ಈ ಎಲ್ಲಾ ಕಾರಣಗಳೇ ಅರೆಭಾಷೆ ದುಸ್ಥಿತಿಗೆ ಕಾರಣವಾಗಿದೆ.

ಕಾಮಾಲೆಯು ಕಣ್ಣಿಗೆ ಜಗತ್ತೆಲ್ಲಾ ಹಳದಿ

ಅರೆಭಾಷೆ ಬೆಳೆಯುವುದರಲ್ಲಿ ಮಾತಾ ಪಿತರ ಪಾತ್ರ ಮಹತ್ವವಾದುದು. ತಮ್ಮ ಮಕ್ಕಳು ಕನ್ನಡ ಮಾತಾಡಿದರೆ ಮಾತ್ರ ತಮಗೆ ಮರ್ಯಾದೆ ಎಂದು ತಿಳಿದಿದ್ದಾರೆ. ಆದ್ದರಿಂದ ಮಕ್ಕಳೊಡನೆ ಚಿಕ್ಕಂದಿನಿಂದ ಕನ್ನಡ ಮಾತಾಡುತ್ತಾರೆ. ಹೆಚ್ಚಾಗಿ ಆರ್ಥಿಕ ಸ್ಥಿತಿ ಉತ್ತಮ ಸ್ಥಿತಿಯಲ್ಲಿರುವರು ಈ ರೀತಿ ಮಾಡುತ್ತಾರೆ. ಆದರೂ ಐದಾರು ವರ್ಷದ ನಂತರ ಎಷ್ಟು ಕನ್ನಡ ಕಲಿಸಿದರೂ ಅರೆಭಾಷೆಯ ಲಕ್ಷಣಗಳು ಚೆನ್ನಾಗಿ ಗಮನಿಸಿದಾಗ ಕಂಡುಬರುತ್ತವೆ. ಒಬ್ಬ ವ್ಯಕ್ತಿಗೆ ಇಬ್ಬರು ಸ್ನೇಹಿತರಿದ್ದರು ಎಂದು ಭಾವಿಸೋಣ. ಆ ಸ್ನೇಹಿತರಿಬ್ಬರು ಕನ್ನಡ ಮಾತಾಡುವವರಾಗಿದ್ದು ಎಸ್.ಎಸ್. ಎಲ್.ಸಿ.ವರೆಗೆ ಜೊತೆಯಲ್ಲಿ ವಿದ್ಯಾಭ್ಯಾಸ ಮುಗಿಸಿದ್ದು, ನಂತರ ಬೇರೆ ಬೇರೆ ಶಿಕ್ಷಣಕ್ಕೋಸ್ಕರ ಕೆಲವು ವರ್ಷಗಳ ತನಕ ಪರಸ್ಪರ ಪ್ರತ್ಯೇಕ ದೂರದ ಸ್ಥಳಗಳಲ್ಲಿ ಇರುತ್ತಾರೆ. ಸ್ನೇಹಿತರಿಬ್ಬರಲ್ಲಿ ಒಬ್ಬ ಕನ್ನಡ ಭಾಷೆ ಬಿಟ್ಟು ಅರೆಭಾಷೆ ಚೆಂದ ಎಂದೂ ಅರೆಭಾಷೆ ಕಲಿತಿರುತ್ತಾನೆ. ಇನ್ನೊಬ್ಬ ಸ್ನೇಹಿತ ಮಾತ್ರ ಅವಕಾಶದಿಂದ ವಂಚಿತನಾಗಿ ಅರೆಭಾಷೆ ಕಲಿಯಲಾಗಲಿಲ್ಲ. ಒಮ್ಮೆ ಆಕಸ್ಮಿಕವಾಗಿ ಮೂವರು ಭೇಟಿಯಾದಾಗ, ಅರೆಭಾಷೆ ಕಲಿತ ಸ್ನೇಹಿತ ಅರೆ ಭಾಷೆಯಲ್ಲಿ ಮಾತನಾಡಿದಾಗ ಈ ವ್ಯಕ್ತಿಗೆ ಆಗುವ ಸಂತೋಷ ಕನ್ನಡ ಮಾತಾಡುವ ಸ್ನೇಹಿತನ ಮಾತಿನ ಸಂತೋಷಕ್ಕಿಂತ ನೂರುಪಟ್ಟು ಜಾಸ್ತಿ ಇತ್ತು. (ಎಂತರಾ? ನಿನ್ನ ಬುದ್ಧಿ ಬುಟ್ಟತೇಲೆ. ಅಂದ್‌ನಂಗೆ ಈಗ ವಳ ಅಲ್ಲಾ? ನೀನ್ ಕೊಡಗ್‌ನವ ಆಕೆ ಕಷ್ಟ ಉಟ್ಟು.) ಕೆಲವು ತಂದೆ ತಾಯಿಗಳು ಎಷ್ಟು ಕಷ್ಟ ಪಟ್ಟರೂ ಆರೇಳು ವರ್ಷ ವಯಸ್ಸಿನ ಮಕ್ಕಳು ತನ್ನಿಂತಾನೆ ಕನ್ನಡ ಬಿಟ್ಟು ಅರೆಭಾಷೆ ಕಲಿಯುವುದು ನೋಡಬಹುದು. ತಂದೆ ತಾಯಿ ಅರೆಭಾಷೆಗೆ ಸೋಲಲೇ ಬೇಕಾಗುತ್ತದೆ. ಇದಕ್ಕೆ ಹಲವಾರು ನಿದರ್ಶನಗಳಿವೆ. ಈಗೀಗ ಹೊರನಾಡಿನಲ್ಲಿ ಚಿಕ್ಕಮಕ್ಕಳಲ್ಲಿ ಅರೆಭಾಷೆ ಬೆಳೆಯುತ್ತಿರುವುದು ನಿಜಕ್ಕೂ ಅಭಿವೃದ್ಧಿಯ ಮುನ್ಸೂಚನೆಯಾಗಿದೆ.

ಅರೆಭಾಷೆಯ ಕೊಡಗಿನ ಜನರು ಯಾವಾಗಲೂ ಉಚ್ಚ ಮಟ್ಟದ ಜೀವನ ಸಾಗಿಸುತ್ತಾರೆ. ಆದರೆ ಕೆಲವೊಮ್ಮೆ ಗೌಡರು ಅಪವಾದಕ್ಕೊಳಗಾಗುತ್ತಾರೆ. ಮಂಗಳೂರಿನ ಯಾವುದೇ ಹೋಟೆಲ್, ಬಾರ್‌ಗಳಲ್ಲಿ ಊಟ ಮಾಡಿ ಪ್ಲೇಟ್‌ಗಳಲ್ಲಿ ಕೈ ತೊಳೆದರೆ ಅಲ್ಲಿಯ ಮಾಣಿಗಳು "ದಾಯಿತಾ ಗೌಡ ಮಾರಾಯ" ಎಂದು ಹಲ್ಲು ಮಸೆಯುತ್ತಾರೆ. ಕೆಲವೊಮ್ಮೆ ಕೇಳಿ ಬಿಡುತ್ತಾರೆ. "ಯಾರು ನೀವು ಮೈಸೂರು ಗೌಡ್ರಾ?" ಅಂತ, ಅಂದರೆ ಈ ರೀತಿ ಮಾಡುವರೆಲ್ಲ ಗೌಡ ಜನಾಂಗದವರೇ ಎಂದು ಮಂಗಳೂರಿನಲ್ಲಿ ತಿಳಿದಿರುವುದು ನಮ್ಮ ದುರಾದೃಷ್ಟ. ತುಳುವರು ಒಂದು ಕಾಲದಲ್ಲಿ ಕೊಡಗಿನ ಗೌಡರಿಗಿಂತ ಕೆಳಮಟ್ಟದ ಜೀವನ ನಡೆಸುತ್ತಿದ್ದರು. ಆದರೆ ಈಗ ತುಳುವರು ಅತೀ ಉತ್ತಮ ಜೀವನ ನಡೆಸುತ್ತಿದ್ದಾರೆ. ಅರೆಭಾಷೆಯಂತೆ ಲಿಪಿ ಇಲ್ಲದ ಭಾಷೆ ತುಳು ಭಾಷೆ ಆಗಿದೆ. ಆದರೆ ಅದರ ಜನಪ್ರಿಯತೆ ಹೇಳಲು ಅಸಾಧ್ಯ. ಪ್ರತಿ ರಂಗದಲ್ಲೂ ಅಭಿವೃದ್ಧಿ ಮತ್ತು ಪ್ರಸಿದ್ಧಗೊಂಡಿದೆ. ಹೊರ ಜಿಲ್ಲೆಗಳಲ್ಲೂ ಪ್ರಭಾವ ಬೀರುತ್ತಿದೆ. ಇದೇ ರೀತಿ ಅರೆಭಾಷೆ ಕೂಡ ಮುಂದುವರಿಯ ಬೇಕು. ಮಂಗಳೂರಿನಂತೆ ಮಡಿಕೇರಿಯಲ್ಲಿ ಕೂಡ ಪ್ಲೇಟ್‌ನಲ್ಲಿ ಕೈ ತೊಳೆಯುವವರು ಕಾಣಸಿಗುವುದಿಲ್ಲ. ಆದರೂ ಮಂಗಳೂರಲ್ಲಿ ಈ ವಿಷಯದಲ್ಲಿ ಗೌಡರ ಹೆಸರು ಹೇಳಲು ಕಾರಣವೇನು? ಎನ್ನುವುದನ್ನು ಇಲ್ಲಿ ವರ್ಣಿಸಬೇಕಿಲ್ಲ. ಅದು ಎಲ್ಲರಿಗೂ ಗೊತ್ತು. ಇದು ಒಂದು ಕೇವಲ ಉದಾಹರಣೆ ಅಷ್ಟೆ. ಯಾವುದೇ ಜನರಾಗಲಿ ಎಲ್ಲಿಯವರೇ ಆಗಲಿ ತಮ್ಮ ಜೀವನ ಮಟ್ಟವನ್ನು ಉತ್ತಮ ಗೊಳಿಸಿ ಕೊಳ್ಳುತ್ತಿದ್ದರೆ ಈಗಿನ ಜನ ಸಂಖ್ಯಾ ದೃಷ್ಟಿಯಿಂದ ತುಂಬಿದ ಈ ನೆಲದಲ್ಲಿ ಹಲವು ವಿಧಗಳಲ್ಲಿ ಪ್ರಯೋಜನಕಾರಿ ಯಾಗಿರುತ್ತದೆ. ಒಬ್ಬನು ಒಳ್ಳೆ ಕೆಲಸ ಮಾಡಿದಾಗ ಅವನ ತಂದೆ ತಾಯಿ ಹೆಸರನ್ನು ಹಾಗೂ ಮನೆ ವಿಚಾರವನ್ನು ವಿಚಾರಿಸುವಂತೆ ಜನರು ಒಳ್ಳೆ ಗುಣಮಟ್ಟದಲ್ಲಿ ಜೀವನ ನಡೆಸಿದರೆ ಆ ಜನಾಂಗದ ನೆಲ ಭಾಷೆ ಎಲ್ಲಾ ವೃದ್ಧಿಗೊಳ್ಳುವುದರಲ್ಲಿ ಸಂಶಯವೇ ಇಲ್ಲ.

ಈ ರೀತಿಯ ಇನ್ನು ಅನೇಕ ವಿಧಧ ಅರೆಗುಣಗಳಿಂದ ಜನರು ಭಾಷೆಯನ್ನು ಅರೆಮಾಡದೆ ಶ್ರೇಷ್ಠ ಹಾಗೂ ಮಹತ್ವದ ಗುಣಗಳಿಂದ ಅರೆಭಾಷೆ ಪೂರ್ಣ ಗುಣವಾಗಿ ಬೆಳೆಯಲಿ. ಭಾಷೆ ಕೇವಲ ಆಚಾರದಲ್ಲಿರದೆ ಪ್ರಚಾರದಲ್ಲಿ ಕೂಡ ವಿಸ್ತಾರವಾಗಿ ಬೆಳೆದು ನಿಲ್ಲಲಿ. ಆದರೆ ಪ್ರಚಾರದಲ್ಲಿ ಸರಳತೆ, ಗೌರವ ಮತ್ತು ಸಮಾನತೆಯಿರಲಿ. ಪ್ರಚಾರದಲ್ಲಿ ಗರ್ವ, ಅಹಂಕಾರ ಎಂದೂ ಇರಬಾರದು.

*"ಅರೆಭಾಷೆ ವಿಜಯಿ ಭವ"*

ಕೊಂಪುಳಿರ ವಿಷ್ಣು ದೇವಯ್ಯ, ಐಕೋಳ.

---

## ಕಾಫಿದರ ಮಹಿಮೆ

ಏರ್‌ತ್ ಏರ್‌ತ್ ಕಾಫಿರೇಟ್,
ಕಾಡ್ ಹೋತ್, ಕಾಫಿ ತೋಟಬಾತ್,
ಹಂಚಿನ ಮನೆ ಹೋತ್, ತೆರಸಿ ಮನೆ ಬಾತ್,
ಮನೆಗೆಲ್ಲಾ ಆದೊ ಆಳ್ ಕಾಳ್,
ಓಡಾಡಿಕೆ ಬಾತ್ ಕಾರ್-ಜೀಪು.
ಕೇಳ್ರೆ ಹೇಳ್ವೆ ನಾನೊಬ್ಬ ಕಾಫಿ ಪ್ಲಾಂಟರ್
ನಂಗುಟ್ಟು ಹತ್ತಿಪ್ಪತ್ ಎಕ್ರೆ ಕಾಫಿ ತೋಟ,
ನಂಗಾದೆ ನೂರಿನ್ನೂರು ಚೀಲಕಾಫಿ,
ಹಿಂಗುಟ್ಟು ಕಾಫಿ ದರ ಮಹಿಮೆ.
ಇಳ್‌ತ್ ಇಳ್‌ತ್ ಕಾಫಿರೇಟ್,
ಕಾಫಿ ತೋಟ ಹೋತ್ ಕಾಡ್ ಆತ್,
ಟಾರಸಿ ಮನೆಗೆ ಬಿತ್ ಬ್ಯಾಂಕಿನ ಜಪ್ತಿ
ಮನೆಗೆ ಆದೊ ಇವೆ ಆಳ್, ಓಡಾಡಿಕೆ ಆತ್ ಕಾಲ್
ಕೇಳ್ರೆ ಹೇಳ್ವೆ ನಾನೊಬ್ಬ ಸಣ್ಣ ರೈತ
ನಂಗುಟ್ಟು ಒಂದೆರಡೆಕರೆ
ಕಾಡ್ ಜಾಗ
ಹೆಂಗುಟ್ಟು ಕಾಫಿ ದರ ಮಹಿಮೆ.

— ಕೂರನ ಆರ್. ವಿನು, ಮೈಸೂರು

---

ಕುರುಡು ಕಣ್ಣಿಗಿಂತ ಮೆಳ್ಳೆಗಣ್ಣೆ ವಾಸಿ

## ಸಂಗಾತಿ ಭವಿಷ್ಯ : ಡಿಸೆಂಬರ್ 16 ರಿಂದ 30, 2000

ಜೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

ಮೇಷ ರಾಶಿ : ದೈವಾನುಕೂಲವಿದೆ . ಆರೋಗ್ಯವು ಸ್ವಲ್ಪ ಮಟ್ಟಿಗೆ ಉತ್ತಮವಿದೆ. ದೂರವಾಗಿದ್ದ ಸಂಸಾರ ಹತ್ತಿರವಾಗುವರು. ಹಣಕಾಸಿನ ವ್ಯವಹಾರ ಉತ್ತಮವಿಲ್ಲ. ಮನಸ್ಸಿಗೆ ಜಿಗುಪ್ಸೆ ಕಾಡುವುದು.

ವೃಷಭರಾಶಿ : ದೈವಾನುಕೂಲವಿಲ್ಲ. ಮಾನಸಿಕ ವ್ಯಥೆ ಹೆಚ್ಚಾಗುವುದು. ಪರರಿಂದ ನೋವು ಅನುಭವಿಸುವಿರಿ. ಸೂಕ್ಷ್ಮ ಬುದ್ಧಿಯನ್ನು ಉಪಯೋಗಿಸಿ ವ್ಯವಹರಿಸಿ. ಹಣಕಾಸಿನ ವ್ಯವಹಾರದಲ್ಲಿ ಸಾಧಾರಣ ನೆಮ್ಮದಿ ಕಾಣುವಿರಿ. ಶನಿಯ ಆರಾಧನೆ ಮಾಡಿರಿ.

ಮಿಥುನ ರಾಶಿ : ದೈವಾನುಕೂಲವಿದೆ. ಉದ್ಯೋಗ ಸಿಗುವ ಸಾಧ್ಯತೆ ಇದೆ. ಹಣಕಾಸಿನ ವ್ಯವಹಾರದಲ್ಲಿ ಸ್ವಲ್ಪ ನೆಮ್ಮದಿ. ಅಪವಾದಕ್ಕೆ ಒಳಗಾಗುವಿರಿ. ನೆಂಟರಿಷ್ಟರು ದೂರಾಗುವರು. ಗೃಹವಲಯದಲ್ಲಿ ದೇವತಾಕಾರ್ಯ ಮಾಡುವ ಹವಣಿಕೆ ಇದೆ.

ಕರ್ಕಾಟಕ ರಾಶಿ : ದೈವಾನುಕೂಲವಿದೆ. ಸಂಸಾರದ ಹಿತ ನುಡಿಗಳನ್ನು ಕೇಳುವಿರಿ. ಪ್ರಯಾಣದಲ್ಲಿ ಹೆಚ್ಚಿನ ಸಮಯ ಕಳೆಯ ಬೇಕಾಗುವುದು. ಸಾಮಾಜಿಕ ಕೆಲಸಗಳಲ್ಲಿ ನಷ್ಟ. ಕುಜನಿಂದ ಉತ್ತಮ ಫಲ ಪಡೆಯುವಿರಿ.

ಸಿಂಹರಾಶಿ : ದೈವಾನುಕೂಲವಿದೆ. ಆರೋಗ್ಯವು ಉತ್ತಮಗೊಳ್ಳುವುದು. ಸಂಸಾರದಲ್ಲಿ ಸುಖ ಶಾಂತಿ ನೆಲೆಸುವುದು. ಉದ್ಯೋಗ ದೊರೆಯುವ ಸಾಧ್ಯತೆ ಇದೆ. ಹಣಕಾಸಿನ ಮಟ್ಟ ಸುಧಾರಿಸುವುದು. ಭೂಮಿ, ವಾಹನ ಖರೀದಿಸುವ ಯೋಗವಿದೆ.

ಕನ್ಯಾರಾಶಿ : ದೈವಾನುಕೂಲವಿಲ್ಲ. ಆರೋಗ್ಯವು ಹದಗೆಡುವುದು. ವಾಹನದಲ್ಲಿ ಸಂಚರಿಸುವಾಗ ಎಚ್ಚರಿಕೆಯಿಂದಿರಿ. ಅಪಘಾತ ಸಂಭವವಿದೆ. ಬಂಧುಗಳಲ್ಲಿ ಕಲಹವೇರ್ಪಡುವುದು. ಸಮಾಧಾನದಿಂದ ವರ್ತಿಸಿದಲ್ಲಿ ಕ್ಷೇಮಕಾರಕ.

ತುಲಾರಾಶಿ : ದೈವಾನುಕೂಲವಿಲ್ಲ. ನಿಮ್ಮ ಬೇಜವಬ್ದಾರಿತನದಿಂದ ಕಾರ್ಯ ಹಾನಿಯಾಗುವುದು. ಮಾತಾಪಿತರಲ್ಲಿ ಕಲಹರ್ವೇಪಡುವುದು. ಅಂಗಾಂಗ ಊನ ಆಗುವ ಸಾಧ್ಯತೆ ಇದೆ. ಪತ್ನಿ ಪುತ್ರರಿಂದ ದೂರಾಗುವ ಸಂಭವವಿದೆ.

ವೃಶ್ಚಿಕ ರಾಶಿ : ವ್ಯವಹಾರ ಉದ್ಯೋಗದಲ್ಲಿ ಅಡ್ಡಿ ಆತಂಕ ಬರಬಹುದು. ಸರಕಾರದಿಂದ ಧನಲಾಭ ಬರುವ ಯೋಗವಿದೆ. ಯಂತ್ರಗಳ ಖರೀದಿ ಯೋಗವಿದೆ. ಹಣಕಾಸು ಸ್ಥಿತಿ ಉತ್ತಮಗೊಳ್ಳುವುದು.

ಧನಸ್ಸು ರಾಶಿ : ಗೃಹವಲಯದ ಹಿರಿಯರೊಬ್ಬರ ಬೋಧನೆಯಿಂದ ತುಂಬಾ ಲಾಭ ಪಡೆಯುವಿರಿ. ಭೂಮಿ ಸಂಬಂಧ ವ್ಯವಹಾರದಲ್ಲಿ ನೀವು ಹೇಳುವ ಮಾತು ನೆರವೇರುವುದು. ಅಧಿಕಾರವು ಕೈ ಸೇರುವುದರಲ್ಲಿ ಸಂದೇಹವಿಲ್ಲ.

ಮಕರ ರಾಶಿ : ದೈವಾನುಕೂಲವಿಲ್ಲ. ಅಧಿಕಾರವು ಮೇಲೆ ಕೆಳಗೆ ಆಗುವುದು. ಅಪಘಾತವಾಗುವ ಸಂಭವವಿದೆ. ಸ್ವಬುದ್ಧಿಯಿಂದ ವರ್ತಿಸಿದಲ್ಲಿ ಗೆಲುವು ಸಿಗುವುದು. ಮೃತ್ಯುಂಜಯ ಜಪ ಮಾಡುವುದರಿಂದ ನೆಮ್ಮದಿ ಕಾಣುವಿರಿ.

ಕುಂಭ ರಾಶಿ : ಉದ್ಯೋಗ ವ್ಯವಹಾರದಲ್ಲಿ ಉತ್ತಮ ಸಾಧನೆಗೈದು ಪ್ರಾಮಾಣಿಕರಾಗುವಿರಿ. ದೇಹದಲ್ಲಿ ಆರೋಗ್ಯವು ಹದಗೆಡುವುದು. ಹಣಕಾಸು ವ್ಯವಹಾರದಲ್ಲಿ ಉತ್ತಮ ಫಲವಿದೆ. ಅನೇಕ ವಿಧದಲ್ಲಿ ಅಧಿಕಾರವು ಅಭಿವೃದ್ಧಿಯಾಗುವುದು.

ಮೀನ ರಾಶಿ : ಮಾತಾಪಿತರ ಅನುಗ್ರಹವು ನಿಮಗಿದೆ. ಆದರೆ ಆರೋಗ್ಯ ಹದಗೆಡುವ ಸಂಭವವಿದೆ. ಸದಾ ತಿರುಗಾಟ ತಪ್ಪಿದ್ದಲ್ಲ. ಗುಪ್ತವಾಗಿದ್ದ ಬಯಕೆಗಳು ಈಡೇರುವುದು. ಹಣಕಾಸು ಸಾಧಾರಣವಾಗಿ ಕೈಗೂಡುವುದು.

---

### ನಾಡ ಸಂಪ್ರದಾಯ

ಯಾರು ಮಾಡಟ ಇಲ್ಲೆ ಯಾರು ನೋಡಟ ಇಲ್ಲೆ
ನಾಡ್ ಜನರಾ ನಾಡ್ ಸಂಪ್ರದಾಯ
ನೋಡಿ ಹೀಂಗಾದರೆ ನಾಡ್ ಹೆಸರಳ್ಳೋದೆ
ಮಾಡೂವೆ ಇಲ್ಲೆ ಇದ್ ಬಾರಿ ಅನ್ಯಾಯ !
ನೋಡಿನಿ ನೀವೇ ನಿಮ್ಮ ನಾಡಿಲಿ ಓಡುವ
ನೆತ್ತರ್‌ಲಿ ಬಂದಂತ ನಾಡಕಲೆನ
ಕೂಡಿಂದ್ ಜನವಲ್ಲ ಮಾಡಿನಾವ್ ಮನ್ಸಿಟ್ಟ್
ಉಳಿಸಿಕೊಣೊಕು ಹಳ್ಳಿ ಕಲೆನ ಬೆಲೆನ !
ಬೆವರಿಳಿಸಿ ದುಡಿವಜನ ಅತಿಕಮ್ಮಿ
ಹಳ್ಳಿಲಿ ಇದ್ದರೂ ನೂರರಲಿ ಒಬ್ಬ ಇಬ್ಬ
ಅಂತವಹ ಮನೆಹಾಳ್ ಮಾಡಿಕೆ ಕಾದಿರುವೆ
ಅಕ್ಕ ಪಕ್ಕದ ಮನೆಲಿ ಯಾರಾದರೊಬ್ಬ !
ಹಳೆ ತಲೆಗ ಅಳ್ದೋಗಿ
ಹೊಸ ಜನಾಂಗ ತುಂಬ್ಯೋಗಿ
ತಲೆ ಮಾರ್‌ಂದ ಬೆಳ್ದ್ ಬಂದ ಕಲೆನ
ಎಳೆ ಕೂಸ್‌ಂದಲೆ ಅದರ ತಿಳಿ ಹೇಳಿನಾವವುಕೆ
ಅಳಿಸದೆ ಬೆಳ್‌ಸೊಕ್ಕು ನಮ್ಮ ಸಂಸ್ಕೃತಿನ !
ಹಳ್ಳಿ ಪೇಟೆನೆ ಆಗಿ ಹಳ್ಳಿಲದ್ ಮರ್ತೋಗಿ
ಜನ ಇಲ್ಲೆ ಪದ ಇಲ್ಲೆ ಜಾನಪದ ಕಲೆನೆ
ಜನಕಿರ್ದು ಮೈಬಿಚ್ಚಿ ಕಾಂಬಂತ ಸಿನೆಮುಚ್ಚಿ
ಜೀವನನ ತಿಳ್ದವುಕೆ ಅದೆ ದೊಡ್ಡ ಬೇನೆ !
ನೇಗಿಲದ್ ಅಂದಿದ್ದ ನೊಂಣಿನೂ ಹಾಳಾಗಿ
ಹೂಡೊವು ಕಮ್ಮಿ ಜನ ಗದ್ದೆ ಒಳಗೆ
ಗೋರಿ ನಾವ್ ಗದ್ದೆಗಳ ಸೇರಿ ಬಿತ್ತುವ ಬೀಜ
ಸೋರಿ ಹೋಗುಟು ಇಂದ್ ಕೆಲ ಹಳ್ಳಿ ಒಳಗೆ !
ಮಾರಿ ಪೂಜೆನು ಅಂದ್ ಜನಸೇರಿ ಮಾಡುವವು
ಮಿತಿ ಮೀರಿದಾ ಕುಸಿಂದ ದೆವ್ವಗಳಿಗೆ
ದಾರಿ ತೋರ್‌ಸಿಕೆ ಬೇಡ್ಯೋ ದನಕರ್‌ಗ ಜನಗಳಿಗೆ
ಊರೊಳಗೆ ಹಬ್ಬಿರುವ ಕೆಲ ಕಷ್ಟಗಳಿಗೆ !
ನಾಡೊಳಗೆ ನಡಿವಂತ ಹಳ್ಳಿ ಮೊದುವೆಗ ಎಲ್ಲ
ಎಲ್ಲಿ ನಡ್ಡದೆ ಸಂಪ್ರದಾಯದಾಂಗೆ
ಗೂಡೆ ಪ್ರಾಯಕೆ ಬಂದ್ ಮೈನೆರ್ದರಾ ಮದುವೆ
ಇಲ್ಲೆ ಅದ್ ಇರುವೊ ಗೊತ್ತಿಲ್ಲದಾಂಗೆ !
ಹಳ್ಳಿ ಜಂಬರಕೆಲ್ಲ ಚಿಂತೆ ಮಾಡದೆ ಜನಂಗ
ಸಂತೆಂದಲೆ ತಕೊಂಡೊವೊ ಬೇಕದಸ್ಟ್
ತನ್ನ ಜಾಗೆಲಿ ದುಡಕೆ ಜನಕಿಂದ್ ಮನ್‌ಸಿಲ್ಲೆ
ಫಸಲ್ ಬರೊಕರೆ ಕಷ್ಟ ಪಡೋಕು ಅಸ್ಟ್ !
ಅಂದ್‌ನಾ ಜಾನಪದ ಜನಪದನ ನೆಸ್ಸಿರೆ
ಮುಂದೆ ಅದ್ ಅಳಿದುಂತ ಬೇಜರಾದೆ
ನಾಳೆನಾ ಪೀಳಿಗೆಗೆ ಎಲ್ಲಾ ಅದ್ ಮರ್ತೋಗಿ
ಪೀಳಿಗೆನ ಕಥೆ ಗೊತ್ತೆ ಏನ್ ಆದೆ.

– ಹೊದ್ದೆಟಿ ಭಾವಾನಿ ಶಂಕರ್, ಬೆಂಗಳೂರು

---

ಬೆಳ್ಳಗೆ ಇದ್ದದ್ದೆಲ್ಲ ಹಾಲಲ್ಲ

# ಪತ್ರ ವಿಭಾಗ :



ಮಾನ್ಯರೆ,

## "ಪ್ರತಿಭೆಗಳಿಗೆ ಅವಕಾಶ"

ನಮ್ಮ ಜನಾಂಗದಲ್ಲಿ ಇತರೇ ಜನಾಂಗಗಳಿಗೆ ಹೋಲಿಸಿದರೆ ಹೊಂದಾಣಿಕೆ ಬಹಳ ಕಡಿಮೆ. ಅಂತಹ ಪರಿಸ್ಥಿತಿಯಲ್ಲೂ ಕೂಡ ಜನಾಂಗದ ಒಳಿತು ಕೆಡಕುಗಳನ್ನು ಉಳಿಸಿ ಬೆಳಸುವಲ್ಲಿ ಕೊಡಗು ಸಂಗಾತಿ ಮಾಡುತ್ತಿರುವ ಪ್ರಯತ್ನ ನಿಜಕ್ಕೂ ಶ್ಲಾಘನೀಯ. ನಮ್ಮ ಕುಲಬಾಂಧವರು ಇಂದು ಅನೇಕ ಅತ್ಯುನ್ನತ ಹುದ್ದೆಗಳಲ್ಲಿದ್ದರೂ, ಜನಾಂಗದ ಏಳಿಗೆ ನಿರೀಕ್ಷಿತ ಮಟ್ಟವನ್ನು ತಲುಪದಿರುವುದು ಬೇಸರದ ವಿಷಯವಾಗಿದೆ. ಜನಾಂಗವನ್ನು ಮುಂದೆ ತರುವಲ್ಲಿ ಎಲ್ಲಾ ಗೌಡ ಸಮಾಜಗಳು, ಸಾಂಸ್ಕೃತಿಕ ಅಕಾಡೆಮಿಗಳು ಒಗ್ಗೂಡಿ ಶ್ರಮಿಸಬೇಕು. ಅಲ್ಲದೆ, ಅದಕ್ಕೆ ಪ್ರತಿಯೊಬ್ಬರು ಸಹಕರಿಸುವುದು ಅಗತ್ಯವಾಗಿದೆ. ಇಂದು, ನಮ್ಮವರು ತಮ್ಮ ಪ್ರತಿಷ್ಠೆಯನ್ನು ಕಾಪಾಡುವುದಕ್ಕೋಸ್ಕರ ಇತರೆ ಸಂಘಸಂಸ್ಥೆಗಳಿಗೆ ಕೇಳಿದಷ್ಟು ದೇಣಿಗೆಯನ್ನು ಕೊಡಲು ತಯಾರಿದ್ದಾರೆ. ಆದರೇ ನಮ್ಮದೆ ಆದ ಸಂಘ ಸಂಸ್ಥೆಗಳ ವಿಚಾರದಲ್ಲಿ ಬಹಳಷ್ಟು ಅಸಹಕಾರವನ್ನು ವ್ಯಕ್ತಪಡಿಸುತ್ತಾರೆ. ಇಂದು ನಮ್ಮಲ್ಲಿ ಅಸ್ಥಿತ್ವದಲ್ಲಿರುವ ಹಲವು ಸಮಾಜಗಳು ಯಾವುದೆ ಬೆಳವಣಿಗೆಯಿಲ್ಲದೆ ಕಿಂಚಿತ್ ರಾಜಕೀಯದ ಆಗರವಾಗಿರುವುದು ತೀರಾ ವಿಷಾದನೀಯ.

ಯಾವುದೆ ಸಂಘ ಸಂಸ್ಥೆಗಳನ್ನು ಹುಟ್ಟುಹಾಕುವುದು ಬಹಳ ಸುಲಭದ ಕೆಲಸ, ಆದರೇ ಅದನ್ನು ಕಾಪಾಡಿಕೊಂಡು, ಪ್ರಗತಿ ಪಥದಲ್ಲಿ ನಡೆಸುವುದು ಬಹಳ ಕಠಿಣ ಕೆಲಸ. ಇಂದು, ನಮ್ಮ ಅನೇಕ ಆಚಾರ ವಿಚಾರಗಳು, ಸಂಸ್ಕೃತಿ ಮುಂತಾದವುಗಳು ಒಂದೊಂದಾಗಿ ಕಣ್ಮರೆಯಾಗುತ್ತಿದೆ. ಅವುಗಳನ್ನು ಉಳಿಸಿ ಮುಂದಿನ ಕೊಂಡಿಗೆಗೆ ಒದಗಿಸಿ ಕೊಡುವುದು ನಮ್ಮೆಲ್ಲರ ಜವಾಬ್ದಾರಿಯೂ ಜೀವದ ಕರ್ತವ್ಯವೂ ಹೌದು. ಜನಾಂಗದ ಪ್ರತಿಭೆಗಳಿಗೆ ಅವಕಾಶ ಅಂದ್ರೆ, ಅವರನ್ನು ಅರಳಿಸಿ ಬೆಳಸುವಲ್ಲಿ ಶ್ರಮಿಸುತ್ತಿರುವ "ಕೊಡಗು ಸಂಗಾತಿ" ಇನ್ನೂ ವರ್ಣಮಯವಾಗಿ ಮೂಡಿ ಬರಲೆಂದು ಆಶಿಸುವ.

– ಜೈನೀರ ನವೀನ್ ವೆಂಕಟೇಶ್, ಶಿವಮೊಗ್ಗ.

---

8ನೇ ಪುಟದಿಂದ

ಆಗಿ ಈಗ ಇನ್ನೂರು ರೂಪಾಯಿ ಕೊಟ್ಟನೆ. ಉಳಿದ ಹಣನ ರೆಡಿ ಆದ ಕೊಡ್ಲೆ ಹೇಳಿ ಆತಾ. ನಾನ್ ಬಂದ್ ತಕಂಡ್ ಹೋನೆತ್ತೇಳಿ ಅವು ಕೊಟ್ಟ ಆರ್ಡರ್ ರಶೀದಿನ ಪಡಕಂಡತ್.

ಸಾವಿರಾರು ಅಸಾಯಕ ಬಡಜನರ ಹಣನ ಲೂಟಿ ಮಾಡಿದ ಈ ಸುರರಾಂ ಮಾರ್ವಾಡಿಂದ ನಾನ್ ಸ್ವಲ್ಪ ಹಣನ ಚೊಟ್ಟಿಕಂಡರೆ ಇದ್ ನಾನ್ ಅನ್ಯಾಯ ಮಾಡಿದಂಗೆ ಆಕಿಲ್ಲೆ. ಯಾಕೆತ್ತೇಳಿರೆ ನನ್ನ ಪಾಲಿಶ್‌ನೇ ಇಷ್ಟ್. ಮೋಸ ಮಾಡುವುಕೆ ತಿರುಗಿ ನಾನೇ ಮೋಸ ಮಾಡಿ ಪಾಠಕಲ್ಸುದು ತಾನೆ ನನ್ನ ಕೆಲ್ಸ.

(ಮುಂದ್‌ವರ್ದದೆ)

# ಸಣ್ಣಪ್ಪ ಸಣ್ಣವ್ವ

ಒಂದು ಊರ್‌ಲಿ ಸಣ್ಣಪ್ಪ ಸಣ್ಣವ್ವ ತೇಳಿ ಗಂಡ ಹೆಣ್ ಇದ್ದೊ. ಸಣ್ಣಪ್ಪ ದಿನಾ ಸಂತೆಗೆ ಹೋದರೆ ಎರಡ್ ಪ್ಯಾಕೆಟ್ ಹಾಕ್‌ತಿತ್. ಸಂತೆ ಬ್ಯಾಗ್‌ಲಿ ಸಣ್ಣವಂಗೆ ತೇಳಿ ಸಣ್ಣಪ್ಪ ಚಾಂಪನ ಅಂಗಡಿಯಿಂದ ಎರಡ್ ಪ್ಯಾಕೆಟ್ ಕೇಳಿ ತಕಂಡ್ ಬರ್‌ತಿತ್. ಆದರೆ ಕುಡಿಯದು ಮಾತ್ರ ಸಣ್ಣಪ್ಪನೆ. ಹಿಂಗೆ ಸಣ್ಣಪ್ಪ ದಿನಾ ದಾರಿಲಿ ಬಾಕಕನ ಒಂದ್ ಕೊತ್ತಿ ಬಲಗಡೆಗೆ ದಾಟ್‌ತಿತ್. ಆಗ ಸಣ್ಣಪ್ಪ 'ಏಕೊತ್ತಿ' ನಿಂಗೆ ಒಳ್ಳೆದಾಗಲಿ ಎಂದ್ ಹೇಳ್‌ತಿತ್. ಹಿಂಗೆ ಒಂದ್ ದಿನ ಸಣ್ಣಪ್ಪ ಸಂತೆಗೆ ಹೋಗಿ ಬಾಕಕನ ಗಮ್ಮತಾಗಿತ್. ಆಗ ದಿನಾ ಬಲಗಡೆಗೆ ದಾಟ್‌ತಿದ್ದ ಕೊತ್ತಿ ಇಂದ್ ಎಡಗಡೆಗೆ ದಾಟಿತ್. ಮುಂದೆ ಒಂದ್ ಕಾರ್ ಬ್ಯಾರೆ ಬರ್‌ತವುಟ್ ಸಣ್ಣಪ್ಪ ದಿನಾ ಕೊತ್ತಿಗೆ ಒಳ್ಳೆಯದಾಗಲಿತ ಹೇಳ್‌ತಿತ್. ಇಂದ್ ನೋಡ್‌ರೆ ನಿಂಗೆ ಹಾವು ಕಚ್ಚಲಿತ ತೇಳಿಕಂಡ್ ಬಾಕಕನ ಮುಂದೆ ಬರ್‌ತಿದ್ದ ಕಾರ್ ಸಣ್ಣಪ್ಪಂಗೆ ಗುದ್ದಿತ್. ಅಂದರೂ ಸಣ್ಣಪ್ಪ ಕೊತ್ತಿಗೆ ಬೈಯದು ಬುಟ್ಟಿತೆಲೆ. ಆಗ ಕಾರ್‌ನವ ಏನ್ ನಂಗೆ ಬೈತೋಳೋ ತೇಳಿ ಕಂಡ್ ಪೆಚ್ಚಾತ್. ಅಂತು ಇಂತು ಕಾರ್‌ನವ ಸಣ್ಣಪ್ಪನ ಎತ್ತಿ ಕಾರ್‌ಲಿ ಹಾಕಿ ಆಸ್ಪತ್ರೆಗೆ ಸೇರಿಸಿತ್. ಹಿಂಗೆ ಸಣ್ಣಪ್ಪಂಗೆ ಕಾರ್ ಗುದ್ದಿ ತಲೆಗೆ ಕಾಲ್‌ಗೆ ಪೆಟ್ಟಾಗಿ ಆಸ್ಪತ್ರೆಗೆ ಸೇರಿಸೋಳೊ ತೇಳಿ ವಾರ್ತೆಲಿ ಬಾತ್. ಈ ಸುದ್ದಿನ ಸಣ್ಣಪ್ಪನ ಊರವು ಸಣ್ಣವಂಗೆ ತಿಳಿಸಕುತ ತೇಳಿ ಬಂದರೇ ಮೊದ್ಲೆ ಸಣ್ಣವ್ವಂಗೆ ಕಿವಿ ಕೇಳ್ಲೆ. ಇನ್ನ್ ಎಂತ ಮಾಡ್ದು ಊರ್‌ನ ಒಂದ್ ಹೈದ ಸಣ್ಣವಂಗೆ ಕಾರ್‌ಗುದ್ದಿ ಆಸ್ಪತ್ರೆಗೆ ಸೇರಿಸೋಳೊ. ಎಂತಾ ಇನ್ನೊಮ್ಮೆ ಹೇಳ್ ಮಗ ನಂಗೆ ಕಿವಿ ಕೇಳ್ಲೆ ಹೈದ ಮನ್‌ಸ್‌ಲಿ ಗ್ಯಾನ ಮಾಡ್ತ್ ನಾನ್ ಯಾಕಾಗಿ ಬಂದೆತ ಹೈದ ಸಣ್ಣವಂಗೆ ಹೇಳ್ತ ಸಣ್ಣವ್ವ ಮತ್ತೆ ಸಣ್ಣಪ್ಪಂಗೆ ಕಾರ್ ಗುದ್ದಿ ಆಸ್ಪತ್ರೆಗೆ ಸೇರಿಸೊಳೊ ತೇಳ್ತ್. ಆಗ ಸಣ್ಣವ್ವ ಎಂತ ಕಾರ್‌ಗೆ ಸಣ್ಣಪ್ಪ ಗುದ್ದಿ ಕಾರ್‌ನ ಆಸ್ಪತ್ರೆಗೆ ಸೇರಿಸೋಳೋ ಅಯ್ಯೋ ಎಂತಾ ಕೆಲ್ಸಾ ಆತ್ ಹೋಗಿ ಆ ಸಣ್ಣಪ್ಪನ ಎಳ್ಕ ಬನ್ನಿ. ಪೋಲಿಸ್‌ಗ ಎಲ್ಲಾರ್ ಎಳ್ಕಂಡ್ ಹೋವೋ ತಾ ಹೇಳ್ತ್. ಆಗ ಹೈದ ನಾನ್ ಯಾಕಾಗಿ ಇಲ್ಲಿಗೆ ಬಂದೆ ತೇಳಿಕಂಡ್ ಸುಸ್ತಾಗಿ ಕುದ್ದೊತ್.

– ಡಿ. ಎನ್. ದಿವ್ಯ, ಆಲೂರು, 8ನೇ ತರಗತಿ

---

## ನಿಧನ

ಕಡಿಯತ್ತುನಾಡಿನ ನರಿಯಂದಡ ಗ್ರಾಮದ ಶ್ರೀ ಮುಂಜಾಪುರ ಮಾದಪ್ಪನವರು ದಿನಾಂಕ 16-11-2000ದಲ್ಲಿ ವೈಕುಂಠವಾಸಿಯಾದರು. ಇವರಿಗೆ 74 ವರ್ಷಪ್ರಾಯವಾಗಿತ್ತು. ಶ್ರೀಯುತರು ಪತ್ನಿ, ಮತ್ತು 3 ಗಂಡು ಒಂದು ಹೆಣ್ಣು ಮಕ್ಕಳಲ್ಲದೆ ಅಪಾರ ಬಂದುವರ್ಗವನ್ನು ಅಗಲಿದ್ದಾರೆ ಎಂದು ತಿಳಿದು ಬಂದಿದೆ.

ವರದಿ : ಮುಂಜಾಪುರ ರವಿ.

---

ಮುಖವು ಮನಸ್ಸಿನ ಕನ್ನಡಿ

13ನೇ ಪುಟದಿಂದ

ದೋಣಿಯೂ ಸಾಗುತ್ತಿದೆ. ಎಷ್ಟೇ ಪ್ರಯತ್ನಿಸಿದರೂ ದೋಣಿ ತನ್ನ ಪಟ್ಟನ್ನು ಬಿಡಲೇ ಇಲ್ಲ. ಕಲಕಾದ ನೀರನ್ನು ನೋಡ ನೋಡುತ್ತಿದ್ದಂತೆ ಇವನಿಗೆ ಆಯಾಸ ಹೆಚ್ಚಾಗುತ್ತಿತ್ತು. ಬೆಳಿಗ್ಗೆ ಮನೆಯಿಂದ ಹೊರಟಾಗ ಏನೂ ತಿಂದಿರಲಿಲ್ಲ. ತಲೆ ಗಿರಗಿರ ಸುತ್ತುವಂತಾಯಿತು. ರಟ್ಟೆ ಸೋತಿತು. ಹುಟ್ಟು ಕೈಬಿಟ್ಟಿತು. ತೇಲಿ ಸಾಗುವ ದೋಣಿಯಲ್ಲಿ ಗಟ್ಟಿಯಾಗಿ ಕುಳಿತ. ಮೊಗಚಿಕೊಂಡರೆ ಏನು ಮಾಡಲಿ? ಇವನ ಜಂಘಾಬಲವೇ ಉಡುಗಿ ಹೋಯಿತು.

"ಕಾಪಾಡೀ.... ಕಾಪಾಡೀ..."

ಯಾವ ಉತ್ತರವೂ ಇಲ್ಲ.

"ಕಾಪಾಡೀ... ಕಾಪಾಡೀ......"

ಗಂಟಲು ಒಣಗಿತೇ ವಿನಃ ಪ್ರಯೋಜನವಾಗಲಿಲ್ಲ.

"ಕೂ...ಕೂ...."

ದೋಣಿ ಸಾಗಿ ಸಾಗಿ ಬಹುದೂರ ಹೋಯಿತು. ಕಣ್ಣು ಕತ್ತಲಾದಂತಾಗುತ್ತಿತ್ತು. ಇವನ ಕೈಯಲ್ಲಿ ಸತ್ತ ಐದು ಮೊಲಗಳು. ಇನ್ನೂ ಸಾಯಲಿರುವ ಜೀವವೊಂದಿತ್ತು - ಚೋಮುಣಿಯ ಜೀವ.

---

18ನೇ ಪುಟದಿಂದ

ತೋರಿಸಬೇಕು ಕೀಳರಿಮೆಯನ್ನು ಬಿಡಬೇಕು ಹೆಣ್ಣು ಯಾವುದರಲ್ಲಿ ಕಡಿಮೆಇಲ್ಲ ಎಂಬುವುದನ್ನು ಹೆಣ್ಣು ಸಾಧಿಸಬಹುದು. ಹೆಣ್ಣು ತನ್ನ ಸುಖವನ್ನು ಮರೆತು ಗಡಿರಕ್ಷಣೆಗಾಗಿ ಹೋರಾಡುವವರು ಹಲವಾರು. ಹೆಣ್ಣು, ಹೆಣ್ಣು ಎಂದು ಕಡೆಗಾಣಿಸುವಿರಾ ಕಣ್ಣು ಕಾಣದ ಗಾವಿಲರು ಎಂದು ಕವಿಗಳು ಹೇಳುತ್ತಾರೆ.

ಮನೆಯನು ಬೆಳಗುವಳು ಹೆಣ್ಣು
ಅವಳೇ ಸಂಸಾರದ ಕಣ್ಣು
ಸಂಸಾರ ನೌಕೆ ನಡೆಸುವಳು
ಗಂಡನ ಪ್ರೀತಿಯ ಬಯಸುವಳು
ಪ್ರೀತಿಯ ಧಾರೆಯ ನೀಗುವನು
ಪ್ರತಿರೂಪ ಹೊತ್ತು ನಡೆಯುವಳು
ಕಷ್ಟದಿ ಹಡೆವಳು ಕಂದನ
ಮೈಮರೆತಳು ನೋವನ
ಕಂದಗೆ ಹಾಲನು ಉಣಿಸುವಳು
ಅಕ್ಕರೆಯಿಂದ ಪಾಲಿಸುವಳು
ಹಸಿವನು ನೀಗಿತು ನನ್ನಮ್ಮ
ಕಿಲ ಕಿಲ ನಕ್ಕಿತು ಕಂದಮ್ಮ
ಲೊಚ ಲೊಚ ಮುತ್ತನು ಕೊಡುವಳು
ಅರಳಿದ ಮೊಗವನು ಕಾಣುವಳು
ನೋವನು ಮರೆತಳು ಕಂದನಲ್ಲಿ
ತೃಪ್ತಿಯ ಪಡೆವಳು ತಾಯ್ತನದಲ್ಲಿ..

ಹೆಣ್ಣು ಇಲ್ಲದ ಮನೆಯಲ್ಲಿ ಹೆಣ್ಣು ಮನೆಗೆ ಹೇಗೆ ಶೋಭೆ ನೀಡುತ್ತದೆಯೋ ಜೊತೆಗೆ ಗಂಡ ಮಕ್ಕಳು ಜೊತೆಯಲ್ಲಿ ಬಾಳ್ವೆ ಮಾಡಿದರೆ ಇಂತಹ ಸುಖ ಬೇರೊಂದಿಲ್ಲ. ಹೆಣ್ಣಿನ ಬವಣೆಯನ್ನು ನಾವು ಅರಿತು ಕೊಳ್ಳಬೇಕು. ಗಂಡು ಸಂಸಾರಕ್ಕೆ ಪ್ರಧಾನ ವಾಗಿರುತ್ತಾರೆ. ಆದರೆ ನಾನಾ ರೀತಿಯ ಚಟಗಳಿಗೆ ಬಲಿಯಾಗ ಬಾರದು. ಒಂದು ಸಂಸಾರವು ಬಂಡಿಯಿದ್ದಂತೆ. ಆ ಬಂಡಿಯ ಗಾಲಿ ಒಂದು ಕಳಚಿದರೆ ಅದು ಮುಂದೆ ಸಾಗದು ಅದನ್ನು ಕಳಚದಂತೆ ರಕ್ಷಿಸಬೇಕಾದವಳು ಹೆಣ್ಣಿನ ಧರ್ಮ ಹಾಗೂ ಕರ್ತವ್ಯ ಕೂಡ. ಅದನ್ನು ತಿಳಿದು ಕೊಂಡರೆ ಸಾಕು ಅಂತಹ ಪರಿಸ್ಥಿತಿಗೆ ಸಿಲುಕದಂತೆ ನಾವು ಜಾಗರೂಕತೆಯಿಂದ ಸಂಸಾರ ಎಂಬ ಗಾಡಿಯಲ್ಲಿ ಸಾಗಬೇಕಾಗಿದೆ. ಇದು ಹೆಣ್ಣಿಗೆಂದೆ ಸೃಷ್ಟಿಸಿದ ಪ್ರಕೃತಿಯ ನಿಯಮ.

ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ.

---

# ವಿಚಿತ್ರ ಸತ್ಯ ಹೆಣದ ಆಸೆಗಾಗಿ ಕೊಲೆ

ಸುಮಾರು 1820ರ ವೇಳೆಯಲ್ಲಿ ಎಡಿನ್ ಬರ್ಗ್‌ನ ವೈದ್ಯಕೀಯ ಕಾಲೇಜಿನಲ್ಲಿ ವಿದ್ಯಾರ್ಥಿಗಳ ಪ್ರಯೋಗಕ್ಕೆ ಹೆಣಗಳು ಸಾಕಷ್ಟಿರುತ್ತಿರಲಿಲ್ಲ. ಆದ್ದರಿಂದ ಆಗ ಅಲ್ಲಿ ಹೆಣಗಳಿಗೆ ಬಹಳ ಬೇಡಿಕೆಯಿತ್ತು. ವಿಲಿಯಂ ಬರ್ಕ್ ಹಾಗೂ ವಿಲಿಯಂ ಹೇರ್ ಇವರಿಬ್ಬರಿಗೆ ಹಣದ ಹುಚ್ಚಿನಿಂದಾಗಿ ಹೆಣಗಳಿಗಾಗಿ ಹುಡುಕ ಬೇಕಾದಂತಹ ಪರಿಸ್ಥಿತಿ ಒದಗಿ ಬಂತು. ಆದರೆ ಅಷ್ಟು ಜನರು ಆಗ ಅಲ್ಲಿ ಸಾಯುತ್ತಿರಲಿಲ್ಲ ! ಪ್ರಕೃತಿಯ ಸಹಾಯಕ್ಕೆ ಕಾಯುವಷ್ಟು ತಾಳ್ಮೆಯು ಸಹ ಅವರಲ್ಲಿರಲಿಲ್ಲ!!

ಅವರು ಜನರನ್ನು ಸಾಯಿಸಲು ಶುರು ಮಾಡಿದರು. ಒಂದು ಹೆಣಕ್ಕೆ ಪಡೆಯುತ್ತಿದ್ದ ಸಂಭಾವನ 10 ಪೌಂಡುಗಳು. ಸಾಯಿಸಲು ಆರಿಸುತ್ತಿದ್ದ ಜನರುಗಳೆಂದರೆ ವಯಸ್ಸಾದವರು, ಹೆಂಗಸರು, ತೆಳುಕಾದ ದೇಹ ವುಳ್ಳವರು, ಯಾರು ನೆಂಟರಿಷ್ಟರು ಇಲ್ಲದವರು, ಇತ್ಯಾದಿ. ಇಂತಹ ವ್ಯಕ್ತಿಗಳನ್ನು ಅವರು ಉಪಾಯದಲ್ಲಿ ಮನೆಗೆ ಕರೆದೊಯ್ದು ಅವರಿಗೆ ಆಲ್ಕೊಹಾಲ್ ಕುಡಿಸಿ ನೆಲಕ್ಕೆ ಬೀಳಿಸುತ್ತಿದ್ದರು. ಒಬ್ಬ ವ್ಯಕ್ತಿಯ ಎದೆಯ ಮೇಲೆ ಕುಳಿತುಕೊಂಡರೆ ಇನ್ನೊಬ್ಬ ಯಾವುದೇ ಗಾಯಗಳಾಗದಂತೆ ಬಾಯಿಗೆ ಬಟ್ಟೆ ತುರುಕಿಸುತ್ತಿದ್ದ. ಈ ಕ್ರಿಯೆಯಲ್ಲಿ ಬರ್ಕ್‌ದ್ದೆ ಪ್ರಧಾನ ಪಾತ್ರವಾಗಿದ್ದರಿಂದ ಈ ರೀತಿ ಸಾಯಿಸುವ ಕ್ರಿಯೆಯನ್ನು "ಬರ್ಕಿಂಗ್" ಎಂಬುದಾಗಿ ವೈದ್ಯಕೀಯ ಶಾಸ್ತ್ರದಲ್ಲಿ ಕರೆಯುತ್ತಾರೆ. ಒಟ್ಟು 32 ಜನರನ್ನು ಸಾಯಿಸಿದ ಮೇಲೆ ಕೊನೆಗೆ ಇಬ್ಬರೂ ಪೋಲೀಸರ ವಶವಾದರು.

ನ್ಯಾಯಾಧೀಶರು ಶಿಕ್ಷೆಯನ್ನು ವಿಧಿಸುತ್ತಾ ಮರಣ ದಂಡನೆಯ ಅನಂತರ ಬರ್ಕ್‌ನ "ಅಸ್ಥಿ ಪಂಜರವನ್ನು" ಕಾಪಾಡಲು ಸೂಚಿಸಿದರು. ಈ ರೀತಿಯ ಅತ್ಯಾಶ್ಚರ್ಯಕರವಾದ ಕೃತ್ಯಕ್ಕೆ ಕಾರಣನಾದ ಮನುಷ್ಯನೊಬ್ಬನ ನೆನಪು ಮುಂದಿನ ಜನಾಂಗಕ್ಕೆ ಇರಲಿ ಎಂಬುದು ಬಯಕೆಯಾಗಿತ್ತು!

ಬರ್ಕ್‌ನ ಅಸ್ಥಿಪಂಜರ ಈಗಲೂ ಎಡಿನ್‌ಬರ್ಗ್‌ನಲ್ಲಿದೆ.

ಡಾ. ಪ್ರವೀಣ ಯನ್. ಎಸ್., MD, DNB, ಕೇರಳ.

---

## 1ನೇ ವರ್ಷದ ಪುಣ್ಯ ಸ್ಮರಣೆ

ಕೋಳಿಬೈಲು ಜೆ. ನಿವಿತ
ಜನನ :18-2-1990
ಮರಣ : 5-12-1999

ನೀನು ನಮ್ಮನ್ನು ಅಗಲಿ ತಾರೀಖು 5-12-2000ಕ್ಕೆ ಒಂದು ವರ್ಷ ಸಂದರೂ ನಿನ್ನ ಸವಿನೆನಪು ಹಾಗೂ ನಿನ್ನ ತ್ಯಾಗ, ಪ್ರೀತಿ, ವಾತ್ಸಲ್ಯಗಳು ನಮ್ಮಲ್ಲಿ ಸದಾ ಹಚ್ಚ ಹಸಿರಾಗಿವೆ. ನಿನ್ನ ದಿವ್ಯಾತ್ಮಕ್ಕೆ ಆ ಭಗವಂತನು ಚಿರಶಾಂತಿಯನ್ನು ಕರುಣಿಸಲೆಂದು ಹೃತ್ಪೂರ್ವಕವಾಗಿ ಪ್ರಾರ್ಥಿಸುವ

ನಿನ್ನ ಅಪ್ಪ-ಅಮ್ಮ, ಅಜ್ಜ-ಅಜ್ಜಿ,
ಅತ್ತೆ-ಮಾವ, ದೊಡಪ್ಪ-ದೊಡ್ಡಮ್ಮಂದಿರು,
ಚಿಕ್ಕಪ್ಪ-ಚಿಕ್ಕಮ್ಮಂದಿರು ಮತ್ತು ಮಕ್ಕಳು.

ಪ್ರಕಟಣೆ : **ಕೋಳಿ ಬೈಲು ಸುಧಾ ಜಯಕುಮಾರ, ಯಲಹಂಕ, ಬೆಂಗಳೂರು.**

## ಕೊಡಗಿನ ಹುತ್ತರಿ ಡಿಸಂಬರ್ 11ರಂದು

ಕೊಡಗಿನ ನಾಡಹಬ್ಬವಾದ ಕೊಡಗು ನಾಡಿನ ಹುತ್ತೇರಿ ಹಬ್ಬವನ್ನು ಡಿಸೆಂಬರ್ 11ರ ಸಂಜೆ 7-30 ಗಂಟೆಗೆ ಕದಿರು ಕುಯ್ಯುವುದರ ಮೂಲಕ ಪಾಡಿ ಶ್ರೀ ಇಗ್ಗುತಪ್ಪ ಸನ್ನಿಧಿಯಲ್ಲಿ ಆಚರಿಸಲಾಗುವುದೆಂದು ತಿಳಿದು ಬಂದಿದೆ.

ನಂತರ ಕೊಡಗಿನವರ ಮನೆ ಮನೆಗಳಲ್ಲಿ ಅಂದು ರಾತ್ರಿ 8 ಗಂಟೆಗೆ ನೆರೆ ಕಟ್ಟುವುದು. 9 ಗಂಟೆಗೆ ಕದಿರು ತೆಗೆಯುವುದು. 10 ಗಂಟೆಗೆ ಭೋಜನದ ಸಂತೋಷ ಕೂಟಕ್ಕೆ ಸೂಕ್ತವೆಂದು ತಿಳಿದು ಬಂದಿದೆ.

ಡಿಸೆಂಬರ್ 11ರಂದು ರೋಹಿಣಿ ನಕ್ಷತ್ರದಲ್ಲಿ ಪಾಡಿಶ್ರೀ ಇಗ್ಗುತ್ತಪ್ಪನ ಸನ್ನಿಧಾನದಲ್ಲಿ "ಕಾಲಾಡ್ಚ್" ಇಗ್ಗುತಪ್ಪ ದೇವರ ಹಬ್ಬ ನಡೆಯುವುದರಿಂದ ಜಿಲ್ಲೆಯ ಸರ್ವರೂ ಸನ್ನಿಧಾನದಲ್ಲಿ ಆಚರಿಸುವ ದಿನದಂದು ಹಬ್ಬವನ್ನು ಆಚರಿಸಬೇಕೆಂದು ಕೋರಿದ್ದಾರೆ.

## ವಿಶ್ವ ಸೌಂದರ್ಯ ಸಾಮ್ರಾಜ್ಯದಲ್ಲಿ ಮತ್ತೆ ಭಾರತದ ಜಯಭೇರಿ. ಪ್ರಿಯಾಂಕ ಚೋಪ್ರಾಗೆ ವಿಶ್ವ ಸುಂದರಿ ಕಿರೀಟ.

ಕಳೆದ ವಿಶ್ವ ಸುಂದರಿ ಪಟ್ಟ ಧರಿಸಿದ್ದ ಭಾರತವು ಈ ವರ್ಷವೂ ವಿಶ್ವಸುಂದರಿ ಕೀರಿಟವನ್ನು ತನ್ನದಾಗಿರಿಸಿ ಹ್ಯಾಟ್ರಿಕ್‌ದತ್ತ ವಿಶ್ವದಾಖಲೆ ಹೊಂದಲು ಮುನ್ನುಗ್ಗುತ್ತಿದೆ. ವಿಶ್ವ ಸುಂದರಿ ಸ್ಪರ್ಧೆಯ 50 ವರ್ಷಗಳ ಇತಿಹಾಸದಲ್ಲಿ ಇಂತಹ ಸಾಧನೆ ಇದೇ ಮೊಟ್ಟ ಮೊದಲು. ಭಾರತ ಸುಂದರಿ (ಮಿಸ್ ಇಂಡಿಯಾ) 18 ವರ್ಷದ ವಿದ್ಯಾರ್ಥಿನಿ ಈ ಹೆಗ್ಗಳಿಕೆ ಪಾತ್ರಳಾಗಿದ್ದು, ಲಂಡನ್‌ನಲ್ಲಿ ನಡೆದ ವಿಶ್ವಸುಂದರಿ ಕಿರೀಟವನ್ನು ಧರಿಸಿದಳು.

ಸರಿಸಾಟಿಯಾಗಿ ಸೆಣಸುತ್ತಿದ್ದ "ಮಿಸ್ ಇಟಲಿ" ಜಿಯಾರ್ಜಿಯಾ ಪಾಮಸ್‌ಳನ್ನು ಎರಡನೇ ಸ್ಥಾನಕ್ಕೂ, "ಮಿಸ್ ಟರ್ಕಿ" ಯುಕ್ಸೆಲಾಳನ್ನುಮೂರನೇಯ ಸ್ಥಾನಕ್ಕೂ ತಳ್ಳಿ "ವಿಶ್ವಸುಂದರಿ"ಯ ಸಿಂಹಾಸನವನ್ನಲಂಕರಿಸಿದಳು.

ಉತ್ತರ ಪ್ರದೇಶದ ಬರೇಲಿಯ ಮನಶ್ಶಾಸ್ತ್ರ ವಿದ್ಯಾರ್ಥಿನಿ ಪ್ರಿಯಾಂಕಳಿಗೆ ಕಳೆದ ಸಾಲಿನ ವಿಶ್ವಸುಂದರಿ ಯುಕ್ತಾಮುಖಿಯು ಕೀರಿಟವನ್ನು ಪ್ರಿಯಾಂಕಳಿಗೆ ತೊಡಿಸಿದಾಗ ವಿಶ್ವಾದ್ಯಾಂತ ಸುಮಾರು ಇನ್ನೂರು ಕೋಟಿ ಟೆಲಿವಿಷನ್ ವೀಕ್ಷಕರು ಹರ್ಷೋದ್ಗಾರಗೈದರು.

ಆದರೆ ಈ ಬಾರಿ ನಸು ದುಃಖವೂ ಇತ್ತು. ೧೯೫೧ರಲ್ಲಿ 'ವಿಶ್ವ ಸುಂದರಿ' ಸ್ಪರ್ಧೆಯನ್ನು ಪ್ರಾರಂಭಿಸಿದ ಬ್ರಿಟಿಷ್ ಉದ್ಯಮಿ ಎರಿಕ್ ಮೋರ್ಲೆ ತಮ್ಮ ೮೨ನೆಯ ವಯಸ್ಸಿನಲ್ಲಿ ಈ ತಿಂಗಳಷ್ಟೇ ನಿಧನ ಹೊಂದಿದ್ದರು.

ಆದರೆ ಅವರ ಬದಲು ಸ್ಪರ್ಧೆಯನ್ನು ಮುಂದುವರೆಸಿದ ಅವರ ಪತ್ನಿ ಜ್ಯೂಲಿಯಾ ಗದ್ಗದಿತರಾಗಿ ನುಡಿದರು. "ಹೌದು, ಅವರಿಲ್ಲದ ಕೊರತೆ ನನ್ನನ್ನು ಕಾಡುತ್ತಿದೆ. ಆದರೆ ಇಂದಿನ ಸಮಾರಂಭ ಅದ್ದೂರಿಯಾಗಿಯೇ ನಡೆಯಬೇಕೆಂಬುದು ಅವರ ಹೆಬ್ಬಯಕೆಯೂ ಆಗಿತ್ತು ಎಂಬುದನ್ನು ನಾನು ಬಲ್ಲೆ."

ಇಲ್ಲಿಯ ಸಹಸ್ರಮಾನ ಗುಮ್ಮಟ (Millenium dome) ದಲ್ಲಿ ನಡೆದ ಸುಮಾರು ಎರಡೂವರೆ ಗಂಟೆ ಕಾಲ ನಡೆದ ಸ್ಪರ್ಧೆಯಲ್ಲಿ ಮೊದಲು ವಿಶಾಲವಾದ ಟಿ.ವಿ.ಪರದೆಯ ಮೇಲೆ ಸ್ಪರ್ಧಾಳುಗಳು ಮಾಲ್ಡೀವ್ಸ್ ಸಮುದ್ರ ದಂಡೆಯಲ್ಲಿ ಬಿಕಿನಿಯಲ್ಲಿ ವಿಹರಿಸುವ ದೃಶ್ಯಗಳನ್ನು ಪ್ರದರ್ಶಿಸಲಾಯಿತು. ನಂತರ ಸಂಜೆಯ ಗೌನಿನಲ್ಲಿ ಬಳುಕುತ್ತ ಬಂದ ಸುಂದರಿಯರಿಗೆ ಅಮೆರಿಕೆಯ ಪ್ರಸಿದ್ಧ ಟಿ.ವಿ. ಕಾರ್ಯಕ್ರಮದ ನಿರ್ವಾಹಕ ಜೆರಿ ಸ್ಪ್ರಿಂಗರ್ ನಾನಾ ಪ್ರಶ್ನೆಗಳನ್ನು ಕೇಳಿ ಗೋಳು ಹುಯ್ದು ಕೊಂಡರು.

ಈ ಪಟ್ಟವನ್ನು ಅಲಂಕರಿಸುತ್ತಿರುವ ಐದನೆಯ ಭಾರತೀಯ ಕುವರಿಯಾದ ಪ್ರಿಯಾಂಕ ತೀರ್ಪುಗಾರರ ಪ್ರಶ್ನೆಗಳಿಗುತ್ತರಿಸುತ್ತ "ನನಗೆ ಸುವಾರ್ತೆ ಹಾಡುವುದೆಂದರೆ ಅಚ್ಚುಮೆಚ್ಚು, ಭಾರತದಲ್ಲಿ ಏಡ್ಸ್ ಜಾಗೃತಿಗಾಗಿ ಶ್ರಮಿಸುತ್ತೇನೆ" ಎಂದಳು.

"ನಾನು ಮನಶ್ಶಾಸ್ತ್ರಜ್ಞೆಯಾಗ ಬಯಸುತ್ತೇನೆ. ಜನರು ಬುದ್ಧಿ ಭ್ರಮಣೆಗೆ ಏಕೆ ಒಳಗಾಗುತ್ತಾರೆ ಎಂಬುದನ್ನು ತಿಳಿದುಕೊಳ್ಳುವುದು ನನ್ನ ಉದ್ದೇಶ. ಆದರೆ ಭಾರತದಲ್ಲಿ ನನ್ನ ವೃತ್ತಿ ಹೆಚ್ಚು ಪ್ರಯೋಜನವಾಗಲಾರದು, ಅಲ್ಲಿಯ ಜನ ಸಂವೇದನಾಶೀಲರು, ಸಮಚಿತ್ತರು." ಎಂದಳು ಪ್ರಿಯಾಂಕ.

"ನನ್ನ ಮನದಾಳದಿಂದ ನಾನು ಮದರ್ ಥೆರೆಸಾರನ್ನು ಪ್ರಶಂಸಿಸುತ್ತೇನೆ. ಜನರ ಮುಖದಲ್ಲಿ ಮಂದಹಾಸ ಮಿನುಗಿಸಲು ಅವರು ತಮ್ಮ ಪ್ರಾಣವನ್ನೆ ಮುಡಿಪಾಗಿಟ್ಟರು." ಎಂದಳಾಕೆ.

ತನ್ನನ್ನು ವಿಶ್ವಸುಂದರಿ ಎಂದು ತೀರ್ಪುಗಾರರು ಸಾರಿದಾಗ ಪ್ರಿಯಾಂಕಗೆ ನಂಬುವುದಕ್ಕೇ ಆಗಲಿಲ್ಲ. "ನನಗೇನಾಗುತ್ತಿದೆ ಎಂಬುದೇ ಗೊತ್ತಾಗಲಿಲ್ಲ. ಇತರ ಹುಡುಗಿಯರು ನನ್ನನ್ನು ಅಭಿನಂದಿಸಲಾರಂಭಿಸಿದಾಗಲೇ ನಾನು ಗೆದ್ದಿದ್ದೇನೆ ಎಂಬುದರ ಅರಿವಾಯಿತು" ಎಂದಳಾಕೆ.

ಯುಕ್ತಾಮುಖಿಯು ಕಿರೀಟವನ್ನು ತನ್ನ ಉತ್ತರಾಧಿಕಾರಣಿಗೆ ತೊಡಿಸಿದಾಗ ಹರ್ಷೋನ್ಮಾದದಿಂದ ಪ್ರಿಯಾಂಕಳ ಕಣ್ಣಲ್ಲಿ ಆನಂದ ಬಾಷ್ಪಗಳುದುರಿದವು.

ಪ್ರಿಯಾಂಕಳ ತಂದೆ ಅಶೋಕ ಚೋಪ್ರಾ, ತಾಯಿ ಮಧು ಹಾಗೂ ೧೧ ವರ್ಷದ ತಮ್ಮ ಸಿದ್ಧಾರ್ಥ ಈ ಅಮೃತ ಘಳಿಗೆಯನ್ನು ವೀಕ್ಷಿಸಲು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ತೀರ್ಪುಗಾರರಲ್ಲೊಬ್ಬರಾದ "ಹಾಟ್ ಚಾಕಲೇಟ್" ಹಾಡಿನ ಪ್ರಮುಖ ಗಾಯಕ ಎರಾಲ್ ಬ್ರೌನ್ "ನಾವು ಸೌಂದರ್ಯವನ್ನು ಮಾತ್ರ ಪರೀಕ್ಷಿಸುತ್ತಿಲ್ಲ. ಮಾನವೀಯತೆ ಹಾಗೂ ಪರೋಪಕಾರದ ಪರವಾಗಿ ಮಾತನಾಡುವ ಮಹಿಳೆಯರನ್ನು ಹುಡುಕುತ್ತಿದ್ದೇವೆ" ಎಂದು ಮೊದಲೇ ಹೇಳಿದ್ದರು.

ಜನರ ವಿಚಾರಗಳು, ಮನಸ್ಸು ಹಾಗೂ ಕ್ರಿಯೆಗಳ ಮೇಲೆ ಪ್ರಭಾವ ಬೀರಲು ನನ್ನ ಯಶಸ್ಸನ್ನು ಉಪಯೋಗಿಸುತ್ತೇನೆ" ಎಂದು ಪ್ರಿಯಾಂಕ ಸಾರಿದಳು.

ಪ್ರಿಯಾಂಕ ಗಳಿಸಿರುವ ಬಹುಮಾನದ ಮೊತ್ತ ಒಂದು ಲಕ್ಷ ಡಾಲರ್‌ಗಳು.

Reg. No. KA/SK/MYS-88 Registered : 10-01-96 TCI Kar. 09592

## Kodagu Gowda Samaja (R.), Bangalore *INVITATION*

The Executive Committee of the **Kodagu Gowda Samaja (R.), Bangalore** in its executive meeting held on 19-11-2000, has resolved as follows :

**"To enable, the community people, to start a educational Institution in the Samaja Building from the Academic Year 2001-2002"**

Towards, this object to start chain of institutions a first step is taken. The constitution of the same will be as envisaged under the Karnataka Society Registration Act 1960. A promotional contribution (Not Donation) a unit of Rs. 10,000/- (Rupees Ten Thousand only) and multiple thereto with non-refundable sum of Rs. 1,000/- (Rupees one thousand only) per unit (Membership fee) is solicited from community persons on or before 31-12-2000.

**Further details can be obtained and corresponded with the undersigned.**

**A. P. VASU**
President, Kodagu Gowda Samaja, Bangalore, Ph. : Res. : 080 - 5467181 Mobile : 9844011043

**KUDUPAJE A. GANAPATHY**
General Secretary, Kodagu Gowda Samaja, Bangalore Ph : Res. 080 - 6683986 Tele Fax : 6525323 (O)

**MOTTANA C. RAVIKUMAR**
Advocate, Convenor, No. 156,/1B, 1st Floor, R. V. Road Cross, V. V. Puram, Near Minerva Circle, Bangalore - 4,
Ph : Res : 6664183 Off. : 6525323 E-mail : Mottana-Ravi@yahoo.com.

## ಕೊಡಗು ಗೌಡ ಸಮಾಜ (ರಿ.), ಬೆಂಗಳೂರು *ಆಮಂತ್ರಣ*

ದಿನಾಂಕ 19-11-2000ದಂದು ಕೊಡಗು ಗೌಡ ಸಮಾಜ (ರಿ.) ಬೆಂಗಳೂರು ಇದರ ಕಾರ್ಯಕಾರಿ ಮಂಡಳಿ ಸಭೆ ಸೇರಿ ಈ ಕೆಳಗಿನ ಒಂದು ಮಹತ್ತರ ತೀರ್ಮಾನಕ್ಕೆ ಬರಲಾಗಿದೆ..

**"ಜನಾಂಗದ ಸರ್ವತೋಮುಖ ಅಭಿವೃದ್ಧಿಗಾಗಿ ಬೆಂಗಳೂರು ಗೌಡ ಸಮಾಜದ ಕಟ್ಟಡದಲ್ಲಿ 2001-2002ನೇ ಸಾಲಿಗೆ ವಿದ್ಯಾ ಸಂಸ್ಥೆಯನ್ನು ತೆರೆಯುವ ಬಗ್ಗೆ"**

ಈ ವಿದ್ಯಾಸಂಸ್ಥೆಯನ್ನು ಪ್ರಾರಂಭಿಸುವುದು ಸರಪಳಿ ವಿದ್ಯಾಸಂಸ್ಥೆ ಯೋಜನೆಗಳ ಮೊದಲಹೆಜ್ಜೆಯಾಗಿರುತ್ತದೆ. ಇದರ ಸ್ಥಾಪನೆಯು ಕರ್ನಾಟಕ ರಾಜ್ಯ ನೋಂದಣಿ 1960ನೇ ವಿಧಿಯಡಿಯಲ್ಲಿ ಆಗುವಂತೆ ಚಿಂತಿಸಲಾಗಿದೆ. ಇದಕ್ಕೆ ಪ್ರೋತ್ಸಾಹಕರ ಕೊಡುಗೆಯಾಗಿ (ದೇಣಿಗೆಯಾಗಿ ಅಲ್ಲ) 10,000/- (ಹತ್ತು ಸಾವಿರ) ರೂಪಾಯಿಗಳ ಗುಣಕಾರದಲ್ಲಿ ಹಿಂತಿರುಗಿಸಲಾಗದ 1,000/- (ಒಂದು ಸಾವಿರ) ರೂಪಾಯಿಗಳ ಸೇರು ಹಣ (ಸದಸ್ಯತನ) ವನ್ನು 31-12-2000ದ ಒಳಗೆ ತಲುಪುವಂತೆ ಜನಾಂಗದ ಬಾಂಧವರಲ್ಲಿ ಮನವಿ ಮಾಡಿಕೊಳ್ಳುತ್ತೇವೆ.

**ಹೆಚ್ಚಿನ ಮಾಹಿತಿಗಳಿಗೆ ಈ ಕೆಳಗೆ ನಮೂದಿಸಿದ ಹೆಸರಿನವರನ್ನು ಸಂಪರ್ಕಿಸುವುದು.**

*ಅಮ್ಮೆ ವ್ವನ ವಾಸು,*
ಅಧ್ಯಕ್ಷರು, ಕೊಡಗು ಗೌಡ ಸಮಾಜ (ರಿ), ಬೆಂಗಳೂರು. ✆ : ಮನೆ : 5467181 ಮೊಬೈಲ್ : 9844011043

***ಕುದುಪಜೆ ಎ. ಗಣಪತಿ,***
ಪ್ರಧಾನ ಕಾರ್ಯದರ್ಶಿ, ಕೊಡಗು ಗೌಡ ಸಮಾಜ (ರಿ), ಬೆಂಗಳೂರು. ✆ : ಮನೆ 080 - 6683986 ಟೆಲಿಫ್ಯಾಕ್ಸ್ ಕಛೇರಿ : 6525323

*ಮೊಟ್ಟನ ರವಿಕುಮಾರ್,*
ವಕೀಲರು, ಸಂಘಟಕರು, ನಂ 156,/1ಬಿ, ಮೊದಲನೇ ಮಹಡಿ, ಆರ್. ವಿ.ರಸ್ತೆಯ ತಿರುವು, ವಿ. ವಿ. ಪುರಂ, ಮಿನರ್ವ ವೃತ್ತ ಹತ್ತಿರ, ಬೆಂಗಳೂರು - 4, ✆ : ಮನೆ 080 - 6664183 ಕಛೇರಿ : 6525323, ಇ ಮೇಲ್ : Mottana-Ravi@yahoo.com.

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.